# ವಿಚಿತ್ರವ್ರತ

(ನಾಟಕವು)



ಲೇಖಕರು :

ಶ್ರೀ । ತ. ಸು. ಕೃಷ್ಣರಾಯರು

ರಂಗಭೂಮಿ ಗ್ರಂಥಮಾಲೆ

|| ಶ್ರೀ ||

# ವಿಚಿತ್ರವ್ರತ

(ನಾಟಕವು)

ಲೇಖಕ :

ಶ್ರೀ। ತ. ಸು. ಕೃಷ್ಣರಾಯರು

ಪ್ರಕಾಶಕರು :

ರಂಗಭೂಮಿ ಕಾರ್ಯಾಲಯ,

ಮನೆವಾರ್ತೆಪೇಟೆ, - - - - ಬೆಂಗಳೂರು ಸಿಟಿ.

ಮುದ್ರಣಕಾರರು :

ಬಿ. ಶ್ರೀನಿವಾಸಯ್ಯಂಗಾರ್,

ಮನೆವಾರ್ತೆಪೇಟೆ, . . . . ಬೆಂಗಳೂರು ಸಿಟಿ

# ಲೇಖಕನ ಎರಡು ಮಾತುಗಳು.

ಈಗ ಸುಮಾರು ಹನ್ನೆರಡು ವರ್ಷಗಳ ಕೆಳಗೆ ನನ್ನ ಲಿಂಗಾಯತ ಸ್ನೇಹಿತರೊಬ್ಬರು, ಈ ನಾಟಕವನ್ನು ತಮಗೆ ಬರೆದು ಕೊಡುವುದಲ್ಲದೆ ನಾನೇ ಎದುರಿಗೆ ನಿಂತು ಅಭ್ಯಾಸಮಾಡಿಸಿ ಆಡಿಸಬೇಕಾಗಿ ಕೇಳಿಕೊಂಡರು. ಅವರ ಮಾತಿಗೆ ನಾನು ಇಲ್ಲವೆಂದು ಹೇಳುವಂತಿರಲಿಲ್ಲ ಏಕೆಂದರೆ ಹಾಗೆ ಹೇಳಿದರೆ, ಅದು ನನ್ನ ಮರ್ಯಾದೆಗೆ ಕಡಿಮೆಯೆಂಬ (ತಪ್ಪೋ ಸರಿಯೋ ಆದ) ಭಾವನೆ. ಅಲ್ಲದೆ ನಮ್ಮ ತಂದೆಯವರು ಆ ಪ್ರಾಂತದಲ್ಲೆಲ್ಲಾ ತುಂಬಾ ಹೆಸರಾದ ಕವಿಗಳು. ಅವರ ಮಗನಾದ ನಾನೂ ಕವಿಯೆಂದೇ ಅಲ್ಲಿ ಜನಸಾಮಾನ್ಯರ ತಿಳುವಳಿಕೆ. ಅದರಿಂದ ನನಗೆ ಅಲ್ಪಸ್ವಲ್ಪ ಗೌರವವೂ ಇತ್ತು. ಅದಕ್ಕೆಲ್ಲಿ ಊನಬರುತ್ತದೆಯೋ ಎಂಬ ಭಯ, ಮೇಲಾಗಿ ನನಗೆ ನಾಟಕಗಳನ್ನು ಬರೆಯುವಷ್ಟು ಯೋಗ್ಯತೆಯು ಇದೆಯೋ ಎಂದು ನನ್ನನ್ನು ನಾನೇ ಪರೀಕ್ಷಿಸಿಕೊಳ್ಳಬೇಕೆಂಬ ಬಹುಕಾಲದ ಕುತೂಹಲ. ಇವೆಲ್ಲವೂ ಸೇರಿ ನನ್ನ ಸ್ನೇಹಿತನ ಮಾತಿಗೆ ನನ್ನನ್ನು ಒಪ್ಪಿಕೊಳ್ಳುವಂತೆ ಮಾಡಿದುವು. ಆದ್ದರಿಂದ ಹಾಗೂ ಹೀಗೂ ಬರೆಯುವುದಕ್ಕೆ ಪ್ರಾರಂಭಿಸಿ ಒಂದೆರಡು ತಿಂಗಳಲ್ಲಿಯೇ ಐದನೆಯ ಅಂಕದ ಐದು ಪ್ರವೇಶಗಳನ್ನೂ ಬರೆದು ಮುಗಿಸಿದೆನು. ಆಗ ಮನಸ್ಸಿಗೆ ಏನೋ ಒಂದು ಬಗೆಯಾದ ಅಧೈರ್ಯವು ಹುಟ್ಟಿ ಬರೆಯುವುದನ್ನು ಅಲ್ಲಿಗೇ ಕೈಬಿಟ್ಟೆನು. ಕೆಲವರು ‘ಇದನ್ನು ಪೂರೈಸಿ ಬರೆದು ಕೊಡಿ, ರಂಗಕ್ಕೆ ತರುತ್ತೇವೆ’ ಎಂದು ಕೇಳಿದರು. ಅವರು ಹಳ್ಳಿಯವರು, ಬೈಲಿನಲ್ಲಿ ಅಟ್ಟದಮೇಲೆ ಕುಣಿಯುವವರು. ಈ ನಾಟಕದಲ್ಲಿ ನಾನು ಹೊರಪಡಿಸಬೇಕೆಂದಿರುವ ಅಭಿಪ್ರಾಯಗಳನ್ನು ಗ್ರಹಿಸಿ ಅಭಿನಯಿಸುವರೆಂಬ ನಂಬುಗೆಯು ನನಗೆ ತೋರಲಿಲ್ಲ. ಆದ್ದರಿಂದ ಕೊಡಲಿಲ್ಲ ಅಲ್ಲದೆ ‘ಪ್ರಬುದ್ಧ ಕರ್ನಾಟಕ’ದಲ್ಲಿ ಒರು ಮನಶ್ಯಾರಂಭಿಸಿದ ಉದ್ದಾಮ ಪಾಂಡಿತ್ಯ ಪ್ರದರ್ಶನದ ಲೇಖನಗಳ ಮತ್ತು ಲೇಖನಕಾರರ ಔನ್ನತ್ಯ ಗಾಂಭೀರ್ಯಗಳು ನನ್ನ ಗ್ರಂಥದ ಪ್ರಚಾರದ ವಿಷಯದಲ್ಲಿ ನನಗಿದ್ದ ಧೈರ್ಯವನ್ನು ಕುಗ್ಗಿಸಿದುವು ಆದ್ದರಿಂದ, ಅದರ ಯೋಚನೆಯನ್ನೇ ಬಿಟ್ಟು ಸುಮಾರು ಹತ್ತು ವರ್ಷಗಳ ಕಾಲ ಯಾವ ಬರೆವಣಿಗೆಯ ಕೆಲಸಕ್ಕೂ ಮನಗೊಡದೆ ಸುಮ್ಮನಿದ್ದೆನು ಈಗ ಕೆಲವು ತಿಂಗಳುಗಳ ಕೆಳಗೆ ಏತಕ್ಕಾಗಿಯೋ ಪೆಟ್ಟಿಗೆಯನ್ನು ತೆಗೆದಾಗ ಈ ಹಳೆಯ ಹಸ್ತಪ್ರತಿಯು ಅರ್ಧಾಂತಕವಾಗಿದ್ದದ್ದು ಕಣ್ಣಿಗೆ ಬಿತ್ತು. ಮಾಡಿದ ಕೆಲಸವನ್ನು ಮುಗಿಸೋಣವೆಂದು ಮನಸ್ಸಿಗೆ ಅನಿಸಿತು. ಆ ದಿನವೇ ಪ್ರಾರಂಭಿಸಿ ಉಳಿದಿದ್ದ ಐದನೆಯ ಅಂಕದ ಆರನೇ ಪ್ರವೇಶವನ್ನು ಎರಡು ಮೂರು ದಿನಗಳಲ್ಲಿ ಬರೆದು ಮುಗಿಸಿದೆನು. ಅನಂತರ ಕೆಲವರು ದೊಡ್ಡ ಪಂಡಿತರಿಗೆ, ಯಾರ ಅಭಿಪ್ರಾಯಕ್ಕೆ ಸಾಹಿತ್ಯದೃಷ್ಟಿಯಿಂದ ಬೆಲೆಯುಂಟೋ ಅವರಿಗೆ, ಇದನ್ನು ತೋರಿಸಿ ತಮ್ಮ ಅಭಿಪ್ರಾಯಗಳನ್ನು ಕೊಡಬೇಕೆಂದು ಬೇಡಿಕೊಂಡೆನು. ಸಾಹಿತ್ಯದ ಅಥವಾ ಪರೀಕ್ಷೆಗಳ ಬಿರುದಿನ ಮುದ್ರೆಯಿಲ್ಲದೆ ಸಾಮಾನ್ಯನಾದ ನನ್ನ ಪ್ರಾರ್ಥನೆಗೆ ಅವರು ಬೆಲೆಕೊಡದಿದ್ದುದೇನೂ ಆಶ್ಚರ್ಯವಲ್ಲ. ‘ನಮಗೆ ವಿರಾಮವೇ ಸಿಕ್ಕುವುದಿಲ್ಲ’ ‘ಅಯ್ಯೋ, ಎಲ್ಲಿಯ ನಾಟಕವಯ್ಯಾ! ಯಾರು ಕೇಳುವವರು!’ ಎಂದು ಮೊದಲಾಗಿ ಹೇಳಿ ಕೈತಿರುಗಿಸಿದರು. ಮೊದಲೇ ನಿರುತ್ಸಾಹಿಯೂ ಭೀತನೂ ಆದ ನನಗೆ ಇದು ಸಾಕಾಯಿತು. ‘ನನ್ನ ನಾಟಕವು ಪ್ರಚಾರಕ್ಕೆ ಬಾರದೆ ಇದ್ದ ಮಾತ್ರಕ್ಕೆ ಪ್ರಪಂಚಕ್ಕೂ ನನಗೂ ಆಗುವ ನಷ್ಟವೇನು’ ಎಂದು ಶುಷ್ಕ ವೈರಾಗ್ಯವನ್ನು ತಂದುಕೊಂಡು ಸುಮ್ಮನಾದೆನು. ಈಚೆಗೆ ನನ್ನ ಸ್ನೇಹಿತರಾದ ವಿದ್ವಾನ್ ಪಾರಿಶವಾಡ್ ಶೇಷಗಿರಿರಾಯರು ನನಗೆ ಧೈರ್ಯವನ್ನು ಕೊಟ್ಟು ಮುಂದೆಳೆದು ನನ್ನನ್ನೂ ನನ್ನ ಗ್ರಂಥವನ್ನೂ ಕೂಡಿಯೇ ‘ರಂಗಭೂಮಿ’ಯ ಸಂಪಾದಕರೂ, ಸುಪ್ರಸಿದ್ಧ ಗ್ರಂಥಕರ್ತರೂ, ಉದ್ದಾಮ ವಿದ್ವಾಂಸರೂ, ಕಲಾಭಿಜ್ಞರೂ ಆದ ಶ್ರೀಯುತ ದತ್ತಾತ್ರೇಯ ಕೃಷ್ಣ ಭಾರದ್ವಾಜರಿಗೆ ಪರಿಚಯ ಮಾಡಿಸಿದರು. ಆ ಮಹನೀಯರು ಭಯ ನಿರುತ್ಸಾಹಗಳಿಂದ ಕುಗ್ಗಿದ ನನ್ನ ಹೃದಯಕ್ಕೆ ಧೈರ್ಯವನ್ನಿತ್ತು ತಮ್ಮ ‘ರಂಗಭೂಮಿ’ಯಲ್ಲಿ ಇದನ್ನು ಪ್ರಸಿದ್ಧಪಡಿಸುವುದಾಗಿ ಆಶ್ವಾಸನ ಕೊಟ್ಟುದಕ್ಕಾಗಿ ನಾನು ಅವರಿಗೆ ಚಿರ-ಕೃತಜ್ಞನಷ್ಟೇ ಅಲ್ಲ-ಋಣಿಯೂ ಆಗಿರುವೆನು. ಇದು-ವ್ಯಾಕರಣ ಛಂದಸ್ಸುಗಳನ್ನರಿಯದ-ಅರಿಯಲನುಕೂಲವಿಲ್ಲದ-ನನ್ನಿಂದ-ಅದರಲ್ಲೂ ಬಾಲ್ಯದೆಶೆಯಲ್ಲಿದ್ದಾಗ ಬರೆಯಲ್ಪಟ್ಟ ಪ್ರಥಮ ಗ್ರಂಥವಾದುದರಿಂದ ಇದರಲ್ಲಿ ಹಲವು ತೆರದ ಲೋಪಗಳಿರಬಹುದು. ಪ್ರಾಜ್ಞರು ಅವುಗಳನ್ನು ತಿದ್ದಿ ಗುಣಾಂಶಗಳಿದ್ದರೆ ಪರಿಗ್ರಹಿಸಿ ಸಂತೋಷಪಡಬೇಕಾಗಿ ಬೇಡುತ್ತೇನೆ. ಶ್ರೀ ಶೇಷಾಚಲ ಸದ್ಗುರುವು ರಂಗಭೂಮಿಗೆ ಮಂಗಳವನ್ನೀಯಲಿ.

ಇತಿ,

**ತ. ಸು. ಕೃಷ್ಣರಾಯ.**




(ನಾಂದ್ಯಂತದಲ್ಲಿ ಸೂತ್ರಧಾರನು ಪ್ರವೇಶಿಸಿ)

ಸೂತ್ರ :—ಶ್ಲೋ॥

ವೃತ್ತ॥ ಶ್ರೀಮದ್ರಾಜಶಿರೋಮಣಿಂ ಗುಣಮಣಿಂ ಭಕ್ತೈಕ ಚಿಂತಾಮಣಿಂ । ಪ್ರೇಮಾವಾಸ ಮನಂತ ಸದ್ಗುಣಯುತಂ ಯೋಗೀಶ ಸಂಪೂಜಿತಂ ॥ ಕಾಮಾರಿಂ ಭಸಿತಾಂಗ ದಿವ್ಯ ವಪುಷಂ ಕೈಲಾಸವಾಸಂ ಶಿವಂ । ನೌಮಿ ಶ್ರೀ ಗಿರಿಜಾ ವರಂ ತ್ರಿಣಯನಂ ಭಕ್ತಿಪ್ರಿಯಂ ಶಂಕರಂ ॥

ಆಹಾ, ಪರಶಿವನ ಪರಮಪ್ರಸಾದ ಲಬ್ಧರಾದ ಈ ಸಭಿಕರನ್ನು ಹೇಗೆತಾನೆ ಮೆಚ್ಚಿಸಲಾದೀತು? ಒಳ್ಳೇದು, ನನ್ನ ಮಿತ್ರನಾದ ಶಂಭುದಾಸನನ್ನು ಕರೆದು ಯೋಚಿಸುವೆನು. (ತೆರೆಯ ಕಡೆ ತಿರುಗಿ) ಮಿತ್ರ, ಶಂಭುದಾಸ, ಕಾರ್ಯವಿಶೇಷವೇನೂ ಇಲ್ಲದ ಭಾಗದಲ್ಲಿ ದಯವಿಟ್ಟು ಸ್ವಲ್ಪ ಬಂದು ಹೋಗು.

ಶಂಭುದಾಸ :— (ಪ್ರವೇಶಿಸಿ) ಏನಯ್ಯಾ ಶಿವದಾಸ, ಇಂಥ ಹೊತ್ತಿನಲ್ಲಿ ನನ್ನನ್ನೇತಕ್ಕೆ ಕರೆದೆ?

ಸೂತ್ರ :—ಏನಯ್ಯಾ, ಎಂಥಾ ಹೊತ್ತು?

ಶಂಭು :—ಶಿವದಾಸ, ಹೀಗೇಕೆ ಕೇಳುವೆ? ಇದು ರಾತ್ರಿಯ ಹೊತ್ತಲ್ಲವೆ?

ಶಿವ: —ಹವುದು. ಆದರೇನು?

ಶಂಭು :—ಈ ಹೊತ್ತಿನಲ್ಲಿ ಜನರಿಗೆಷ್ಟು ಕೆಲಸವೆಂಬುದು ತಿಳಿಯದೋ?

ಶಿವ :—ಅದೇನಯ್ಯಾ, ಅಂಥಾ ಕೆಲಸ?

ಶಂಭು :—ಹೇಳುತ್ತೇನೆ ಕೇಳು.

ಕಂದ॥ ಕೆಲಬರ್ ಚೌರ್ಯವಗ್ರೈವರ್ ।
ಕೆಲಬರ್ ವ್ಯಭಿಚಾರ ಜೂದ ಪಾನಾಸಕ್ತರ್ ॥
ಕೆಲಬರ್ ನಿರ್ಮಲ ಚಿತ್ತರ್ ।
ನಲೆ ಭಜಿಪರು ನೀಲಕಂಠ ನಡಿದಾವರೆಯಂ ॥

ಹೀಗೆ ಅವರವರ ಚಿತ್ತವೃತ್ತಿಗನುಸರಿಸಿ ಜನಗಳು ಕಾರ್ಯಾಸಕ್ತರಾಗಿರುವರು. ಈಗ ನೀನೇನು ಮಾಡಬೇಕೆಂದಿರುವೆ?

ಶಿವ :—ಈಗ ನಾನೊಂದು ನಾಟಕವನ್ನಭಿನಯಿಸಬೇಕೆಂದಿರುವೆನು.

ಶಂಭು :—ಏನು! ನಾಟಕವೆ! ಥೂ! ನಾಟಕವನ್ನು ನೋಡುವುದೇ ಮಹಾ ಪಾಪವಾಗಿರುವಲ್ಲಿ ಅದನ್ನು ಅಭಿನಯಿಸುವ ವಿಷಯದಲ್ಲಿ ಹೇಳುವದೇನಿದೆ?

ಶಿವ :— ಅದೇಕಯ್ಯಾ, ನಾಟಕವನ್ನು ಅಷ್ಟೊಂದು ಜರಿಯುತ್ತೀ? ನಾಟಕಗಳು ಅಷ್ಟು ನಿಷ್ಪ್ರಯೋಜನವಾಗಿದ್ದರೆ ಪೂರ್ವಿಕರು ಅವುಗಳನ್ನೇಕೆ ಬರೆಯುತ್ತಿದ್ದರು?

ಶಂಭು :—ನಾಟಕಗಳನ್ನು ಬರೆದು ಅಭಿನಯಿಸುವುದರಲ್ಲಿ ಹಿಂದಿನವರ ಉದ್ದೇಶವೇ ಬೇರೆ. ನಮ್ಮ ಪುರಾಣಪುರುಷರ ಶೌರ್ಯೌದಾರ್ಯ ಸಾಹಸಾದಿ ಸದ್ಗುಣಗಳು ಪ್ರಕಾಶಕ್ಕೆ ಬರಬೇಕೆಂತಲೂ, ನೋಟಕರ ಮನಸ್ಸಿನಮೇಲೆ ಅವು ಬಿಂಬಿಸಿ ಅವರನ್ನು ಸನ್ಮಾರ್ಗಕ್ಕೆ ತರಬೇಕೆಂತಲೂ ಹಿಂದಿನವರ ಉದ್ದೇಶ. ಈಗಲಾದರೋ ಶೃಂಗಾರರಸಪ್ರಧಾನವಾದ ನಾಟಕಗಳನ್ನು ಮುಂದುಮಾಡಿ ಅಂದವಾದ ಬಟ್ಟೆಬರೆಗಳಿಂದಾಗಲಿ, ಆಡಂಬರವಾದ ಸಂಗೀತದಿಂದಾಗಲಿ, ಬೆಡಗಿನ ಹಾವಭಾವಗಳಿಂದಾಗಲಿ ಅಜ್ಞರನ್ನು ಮರುಳುಗೊಳಿಸಿ ಅವರ ಧನವನ್ನು ಸೆಳೆದು ತಮ್ಮ ಉದರ ನಿರ್ವಾಹವನ್ನು ಸಾಗಿಸುತ್ತಿರುವ ನಾಟಕ ಸಂಘಗಳೇ ಎಲ್ಲೆಲ್ಲಿಯೂ ವಿಶೇಷವಾಗಿವೆ. ಇವುಗಳಿಂದ ಜನತೆಗೆ ಹಾನಿಯೇ ಹೊರತು ಲಾಭವಿಲ್ಲ.

ಶಿವ :—ಶಂಭುದಾಸ, ನೀನು ಕೇವಲ ದೋಷೈಕ ಪಕ್ಷಪಾತಿಯಾಗಿ ಕಾಣುತ್ತೀಯೆ. ನಾಟಕಗಳೆಲ್ಲವೂ ಕೆಟ್ಟುವೇ ಆಗಿದ್ದರೆ ಇಷ್ಟುಹೊತ್ತಿಗೆ ನಾಟಕವೆಂಬ ಹೆಸರೇ ಅಳಿದು ಹೋಗುತ್ತಿತ್ತು. ಸಾಧ್ಯವಾದಮಟ್ಟಿಗೂ ನಾವು ಒಳ್ಳೆಯ

ನಾವುದನ್ನೇ ಅಭಿನಯಿಸೋಣ.

ಶಂಭು :—ಹಾಗಾದರೆ ಈಗ ಯಾವ ನಾಟಕವನ್ನಭಿನಯಿಸ ಬೇಕೆಂದಿರುವೆ ?

ಶಿವ :—ಮೊನ್ನೆ ನಾವಿಬ್ಬರೂ ಸೇರಿ ಮಾತನಾಡಿದ್ದೆವಲ್ಲಾ, ಅದು ಯಾವ ನಾಟಕ ? ಅದರ ಹೆಸರು ಮರೆತುಹೋಯಿತು. ಅದಕ್ಕಾಗಿಯೇ ನಿನ್ನನ್ನು ಕೇಳೋಣವೆಂದು ಕರೆದೆನು.

ಶಂಭು :—ನನಗೂ ಮರೆತುಹೋಗಿದೆ. ಇರಲಿ, ಶಿವದಾಸ, ಮೊನ್ನೆ ಯುಗಾದಿ ಹಬ್ಬದಲ್ಲಿ ಎಷ್ಟು ಜನ ಜಂಗಮರಿಗೆ ದಾಸೋಹಮಾಡಿಸಿದೆ? ಎಷ್ಟು ಖರ್ಚಾಯಿತು ?

ಶಿವ :—ದಾಸೋಹವ್ರೋ, ಗೀಸೋಹವ್ರೋ, ಈ ಕೆಟ್ಟ ಕಾಲದಲ್ಲೇನು ಮಾಡಲಾಗುತ್ತದೆ. ಅಲ್ಲದೆ ದಾಸೋಹಕ್ಕೆ ಯೋಗ್ಯರಾದ ಜಂಗಮರೂ ಸಿಕ್ಕುವುದಿಲ್ಲ. ಈಗಿನ ಜಂಗಮರ ಆಚಾರ ವಿಚಾರಗಳನ್ನು ಹೇಳುವಂತೆಯೇ ಇಲ್ಲ. ಇವರೇನು ಜಂಗಮರೋ ಮಂಗಮರೋ ಪರಮೇಶ್ವರನಿಗೇ ಗೊತ್ತು.

ಶಂಭು .— ಇದೇನಯ್ಯಾ ಅನ್ಯಾಯ ! ಪರಶಿವನಿಗಿಂತಲೂ ದೊಡ್ಡವರೆಂದು ನಾವು ಭಾವಿಸುತ್ತಿರುವ ಜಂಗಮ ಗುರುಗಳನ್ನು ನಿಂದಿಸಬಹುದೆ ! ಶಿವ ಶಿವ !

ಶಿವ :—ಆಹಾಹಾ ! ಏನು ಗುರುಗಳಯ್ಯಾ! 'ಗುಕಾರಸ್ತ್ವಂಧಕಾರಸ್ತು | ರುಕಾರಸ್ತನ್ನಿರೋಧಕಃ || ಅಂಧಕಾರ ನಿರೋಧತ್ವಾ | ದ್ಗುರು ರಿತ್ಯಭಿಧೀಯತೇ' ಎಂಬಂತೆ ಶಿಷ್ಯರ ಅಜ್ಞಾನವನ್ನು ಕಳೆದು ಅವರಿಗೆ ಮೋಕ್ಷಮಾರ್ಗವನ್ನು ತೋರಿಸುವವರು ಗುರುಗಳು. ಈಗಿನ ನಾಮಮಾತ್ರವಾದ ಗುರುಗಳ ಸಹವಾಸದಿಂದ ಮೋಕ್ಷಮಾರ್ಗಕ್ಕೆ ಬದಲಾಗಿ ನಾವು ನರಕಮಾರ್ಗವನ್ನೇ ಹಿಡಿಯುತ್ತೇವೆ.

ಶಂಭು :—ಏನಯ್ಯಾ, ಶಿವದಾಸ. ಗುರುಗಳನ್ನು ತೀರಾ ಹೀಯಾಳಿಸುತ್ತಿ ?

ಶಿವ :—ಅಯ್ಯಾ, ಈಗಿನ ಗುರುಗಳ 'ಗುರು'ತ್ವಕ್ಕೆ ಅರ್ಥವನ್ನು ಹೇಳುತ್ತೇನೆ, ಕೇಳು.

ಕಂದ|| ಗುರುವೆಂಬವರೆ ಬಲ್ಭಾರಂ |
ಗುರುನಾಮಕರೀ ದುರಾತ್ಮರಿಳೆಗತಿಭಾರಂ ||
ಗುರುಗುಟ್ಟುವ ಕುಕ್ಕುರದೋಲ್ |
ದುರುಳರಿವರ್ ತ್ಯಾಜ್ಯರೆಮಗೆ ಭಾವಿಸೆ ಜಗದೊಳ್ ||

ಶಂಭು :—ಅಯ್ಯಾ, ಶಿವದಾಸ, ಗುರುದೂಷಕನಾದ ನಿನ್ನ ಸಹವಾಸವು ನನಗೆ ಬೇಡ. ನೀನೊಬ್ಬನೇ ಈ ಪ್ರಪಂಚದಲ್ಲಿ ಉತ್ತಮನು. ಉಳಿದವರೆಲ್ಲಾ ಕೆಟ್ಟವರೆಂದು ಭಾವಿಸಿರುವೆ. ಇದೋ ನಿನ್ನ ಸ್ನೇಹಕ್ಕೊಂದು ನಮಸ್ಕಾರ. (ಹೊರಡುವನು)

ಶಿವ :— (ನಿಲ್ಲಿಸಿ) ಮಿತ್ರಾ, ಕೋಪಗೊಳ್ಳಬೇಡ. ಈಗಿನ ಜಂಗಮರ ಸಾಮಾನ್ಯ ಸ್ಥಿತಿಯನ್ನು ನಾನು ಬಣ್ಣಿಸಿದೆನೇ ವಿನಾ, ಗುರುನಿಂದೆಯೇ ನನ್ನ ಉದ್ದೇಶವಲ್ಲ. ನಾಟಕಗಳಲ್ಲಿಯೂ ಹೇಗೆ ಒಳ್ಳೆಯವಿದೆಯೋ ಹಾಗೆಯೇ ಜಂಗಮರಲ್ಲಿಯೂ ಒಳ್ಳೆಯವರಿದ್ದಾರೆ. ಆ ವಿಷಯದಲ್ಲಿ ನೀನು ಎಂದಿಗೂ ವ್ಯಥೆಪಟ್ಟುಕೊಳ್ಳಬೇಡ. ಈಗ ಹೇಳು ಯಾವ ನಾಟಕವನ್ನಭಿನಯಿಸೋಣ.

ಶಂಭು .—ಶಿವದಾಸ, ಈಗ ಜ್ಞಾಪಕ ಬಂತು. ನೀನು ಹೇಳಿದುದು ವಿಚಿತ್ರವಾದ ವ್ರತವನ್ನಾಚರಿಸಿದ ಇಕ್ಕದಮಾರನೆಂಬ ಶಿವಶರಣನ ನಾಟಕವಲ್ಲವೇ ? ಇದು ನೂತನವಾಗಿರುವಂತೆ ತೋರುತ್ತದೆ. ಇದನ್ನು ರಚಿಸಿದ ಕವಿಯಾರು ? ಆತನ ವಿಷಯವೇನು ? ಸ್ವಲ್ಪ ಹೇಳು.

ಶಿವ —ಮಿತ್ರ, ತಳುಕುವಾಸಿಯಾದ

ಕಂದ|| ಕವಿ ಸುಬ್ರಹ್ಮಣ್ಯಾತ್ಮಜ |
ಶಿವಚರಣ ಸರೋಜ ಮಧುಪ ಕೃಷ್ಣಾರ್ಯಂ ಯಾ |
ಕವನವ ಗುರುಕೃಪೆಯಿಂದಂ |
ತವೆರಚಿಸಿದ ನಿದುವೆ ಯಾತ ನಾದಿ ಗ್ರಂಥಂ ||

ಆತನು ತನ್ನ ವಿಷಯದಲ್ಲಿ ಹೇಗೆ ಹೇಳಿಕೊಂಡಿರುವನು :—

ಕಂದ|| ಪದಕ್ರಮವನರಿಯದ ತರಳನ |
ವದನದಿ ಬಲು ಮಮತೆಯಿಂದ ಪೊರಮಡಿಸಿದನ್ನೈ ||
ಸದಯಾತ್ಮ ಸದ್ಗುರೂತ್ತಮ |
ಬುಧಜನ ಚೇತೋ ವಿಲೋಲ ಶೇವಾಚಲತಾಂ ||

ಕಂದ|| ಗುಣಲೇಶ ಗುರುವಿಗರ್ಪಿತ |
ಗುಣಹೀನತೆಗಾಗಿ ಬಂದ ನಿಂದೆಯು ತನಗೆ ||
ಗುಣವನೆ ನೋಳ್ಪುದು ಸುಜನರು |
ಗಣಿಸದೆ ದೋಷಗಳನೆಂದು ಕೈಮುಗಿದೊರೆವೆಂ ||

ಇದೇ ಈ ಕವಿಯ ಚರಿತ್ರೆ. ತಿಳಿದಂತಾಯಿತಷ್ಟೆ. ಇನ್ನು ಹೋಗೋಣ ನಡೆ.

ಶಂಭು :—ಆಗಬಹುದು.

(ಇಬ್ಬರೂ ಹೊರಟುಹೋಗುವರು)

## ಪ್ರಥಮಾಂಕವು—ನೋಟ ೧

(ಗ್ರಾಮದ ಬೀದಿಯಲ್ಲಿ ಮಾರಯ್ಯ ಮಾರವ್ವ ಪ್ರವೇಶಿಸುವರು).

ಮಾರ :— ಸಖೀಮಣಿ, ಲೋಕದಲ್ಲಿ ಜನ್ಮತಾಳಿದಮೇಲೆ ಮಹಾದೇವನನ್ನು ಮೆಚ್ಚಿಸದಿದ್ದರೆ ಆ ಜನ್ಮವು ವ್ಯರ್ಥವಲ್ಲವೆ ? ಏನುಮಾಡಿದರೆ ಪರಶಿವನು ಒಲಿಯುವನೋ ಕಾಣೆನಲ್ಲಾ.

ಮಾರಿ :—ನಾಥ, ನನಗೂ ಅದೇ ಚಿಂತೆಯೇ ಮನಸ್ಸನ್ನೆಲ್ಲಾ ಆವರಿಸಿಬಿಟ್ಟಿರುವುದು. ನಮಗಾದರೋ ಸಂತಾನ ಸೌಭಾಗ್ಯವಿಲ್ಲ. ಬೇಕಾದಷ್ಟು ದ್ರವ್ಯವಿರುವುದು. ಆದರೂ ಪುತ್ರಹೀನರಾದ ನಮಗೆ ಏನಿದ್ದರೂ ವ್ಯರ್ಥವೇ ಸರಿ. ಇಹ ಭೋಗವೇನೋ ನಮಗಿಲ್ಲ. ಆದ್ದರಿಂದ ಪರಾತ್ಪರನಾದ ಪಾರ್ವತೀರಮಣನನ್ನೊಲಿಸಿ ಪರಲೋಕ ಸೌಖ್ಯವನ್ನಾದರೂ ಪಡೆಯೋಣ.

ಮಾರ :—ಪ್ರಿಯೆ, ನಿನ್ನ ಮಾತು ನಿಜ. ಆದರೆ ಯೋಗಿಗಳಿಗೂ ದುರ್ಲಭನಾದ ಮೃತ್ಯುಂಜಯನು ಒಲಿಯುವ ಬಗೆ ಹೇಗೆ ?

ಮಾರಿ .—ಏಕೆ ? ಎಷ್ಟೋ ವಿಧವಾದ ವ್ರತಗಳನ್ನು ಹಿರಿಯರು ನಿರ್ಣಯಿಸಿದ್ದಾರಷ್ಟೆ. ಅವುಗಳಲ್ಲಿ ನಮಗೆ ಅನುಕೂಲವಾದ ಯಾವುದಾದರೊಂದು ವ್ರತವನ್ನವಲಂಬಿಸೋಣ. ಅದರಿಂದ ನಮಗೆ ಇಷ್ಟಾರ್ಥ ಸಿದ್ಧಿಯಾಗಬಹುದು.

ಮಾರ :—ಸರಿ. ಅಂತಹ ವ್ರತವಾವುದಿರುವುದು ?

ಮಾರಿ :—ಪುಣ್ಯಕರಗಳಾದ ಶಿವರಾತ್ರಿವ್ರತ, ಕೇದಾರೇಶ್ವರ ವ್ರತ, ಸೋಮವಾರದ ವ್ರತವೇ ಮೊದಲಾಗಿ ಅನೇಕ ವ್ರತಗಳಿರುವುವಲ್ಲಾ.

ಮಾರ .—(ಯೋಚಿಸಿ) ಕಾಂತಾಮಣಿ, ಎಲ್ಲರೂ ಮಾಡಿದಂಥ ವ್ರತವನ್ನೇ ನಾವು ಆಚರಿಸಿದರೆ ನಮ್ಮದೇನು ದೊಡ್ಡಸ್ತಿಕೆಯಾಯಿತು ? ನಾವೊಂದು ಹೊಸದಾದ ವಿಲಕ್ಷಣವಾದ ವ್ರತವನ್ನಾಚರಿಸೋಣ. ಅದರಿಂದ ದೇವರೂ ಮೆಚ್ಚಬೇಕು, ನಮಗೂ ಅನುಕೂಲವಾಗಬೇಕು.

ಮಾರಿ :—ಪ್ರಾಣನಾಥ, ಅಲ್ಪಬುದ್ಧಿಯಾದ ನನಗೆ ಅಂತಹ ವ್ರತವೊಂದೂ ತೋಚದು.

ಮಾರ :—ಸಖಿ, ನಾನು ಹೇಳುವ ವ್ರತದ ವಿಷಯವನ್ನು ಕೇಳು. ಅದು ಬಹು ಸುಲಭವಾದದ್ದು. ದುಡ್ಡು ಖರ್ಚಿಸದಲ್ಲ. ದೇಹ ಕಷ್ಟಪಡಬೇಕಾದ್ದಿಲ್ಲ. ದಾನಧರ್ಮಗಳ ಪ್ರಸಕ್ತಿಯೇ ಅದರಲ್ಲಿಲ್ಲ. ನಾಲ್ಕು ವೇದಗಳು, ಆರು ಶಾಸ್ತ್ರಗಳು, ಹದಿನೆಂಟು ಪುರಾಣಗಳು, ಭೂಮಿ, ಆಕಾಶ ನದಿ ಬೆಟ್ಟ ಇವುಗಳಲ್ಲೆಲ್ಲಿ ಹುಡುಕಿದರೂ ಸಿಕ್ಕುವುದಿಲ್ಲ.

ಮಾರಿ :—ಅಬ್ಬಾ, ಅಂಥ ವಿಚಿತ್ರವಾದ ವ್ರತವು ಇನ್ನಾವುದಿರಬಹುದು. ಆರ್ಯಪುತ್ರ, ಅಪೂರ್ವವಾದ ಇಂಥಾ ವ್ರತವನ್ನು ಕಂಡ ಹಿಡಿದಿರುವ ನಿಮ್ಮ ಬುದ್ಧಿ ಶಕ್ತಿಯು ನಿಜವಾಗಿಯೂ ಅಗಾಧವಾದದ್ದು. ನನಗಂತೂ ಆ ವ್ರತದ ಹೆಸರನ್ನು ಕೇಳಲು ಕುತೂಹಲವು ಕ್ಷಣೇ ಕ್ಷಣೇ ಹೆಚ್ಚುತ್ತಿರುವುದು. ಆದರ ಹೆಸರೇನು ಆಂಜನೇಯನ ಬಾಲದಷ್ಟುದ್ದವಾಗಿರುವುದೋ ?

ಮಾರ :—ಪ್ರಿಯೆ, ಅದೇನೂ ನೀನು ಭಾವಿಸುವಷ್ಟು ದೊಡ್ಡದಲ್ಲ. ಅದರ ಹೆಸರು 'ದಾನಶೂನ್ಯ' ವ್ರತ.

ಮಾರಿ :—ನಾಥ, ಇದೆಂಥಾವ್ರತ ? ಇದರ ಆಚರಣೆ ಹೇಗೆ ? ಇದರ ಫಲವೇನು ?

ಮಾರ :—ಇದು ಬಹು ಗಂಭೀರವಾದ ವ್ರತ. ಯಾರಿಗೂ ಏನನ್ನೂ ಕೊಡದೇ ಇರುವುದೇ ಇದರ ಆಚರಣೆ. ಇದರ ಫಲವು ಅನಂತವಾದದ್ದು, ಈ ವ್ರತಾಚರಣೆಯಿಂದ ಸಾಂಬಮೂರ್ತಿಯು ನಿಜವಾಗಿಯೂ ಮೆಚ್ಚುವನು.

ಮಾರಿ .—ಪ್ರಾಣಕಾಂತ, ಇದೇನು ಹೇಳಿದೆ.

ಕಂದ|| ಏನುಂ ದಾನವ ಕೊಡದಿರೆ |
ಏನೆಂಬರು ಜನರು ಲೋಕದೊಳಗೆಮ್ಮಂ ಸಂ ||
ಮಾನಿಪರೆ ನಾಥ ಯೋಚಿಸು |
ಹೀನೈಸದೆ ಬಿಡರು, ಬೇಡವೀವ್ರತವೆಮಗೆ ||

ಮಾರ :— ಸಖೀಮಣಿ, ನಿನಗೆ ತಿಳಿಯದು ಹೇಳುತ್ತೇನೆ ಕೇಳು.

ಸೀಸಪದ್ಯ|| ಎರಪೆಣೆಸದಿರು ಕಾಂತೆ | ಚರಿಸಿದನು ಮತಿವಂತೆ |
ಪರಶಿವನು ಕರುಣಿಪನು | ಸಟೆಯಿದಲ್ಲ ||

ಮಾರಿ :—ಆಚರಿಸಲಂತಿದನು | ನೀಚರೆಂದೆಮ್ಮನು | ವಾ
ಚಿಸರೆ ಜನರು । ಯೋಚಿಪ್ಪುದು ನಲ್ಲ ॥

ಮಾರ :—ನಿಂದೆವಂದನೆಗಳಿಗೆ | ಕುಂದದಲೆ ಬೆರೆಯದಲೆ |
ಚಂದ್ರಮೌಳಿಯ ಭಜಿಪುದುಚಿತ ಕೇಳು ||

ಮಾರಿ :—ದೂರಲೆಮ್ಮನು ಬರದೆ । ಸೈರಿಪೆನದೆಂತೊ ನಾರಿ |
ಸಾರಸಾಕ್ಷನೆ ನೀನೆ ತಿಳಿದು ಪೇಳು ||

ಮಾರ :—ಉಪಕಾರಿಗಳು ನಮಗೆ | ವ್ಯಪದೇಶಕಾರಕರು |
ವಿಪರೀತ ಪಾಪಗಳ | ನಪಹರಿಪರು ॥

ಮಾರಿ :— ನಲ್ಲನಿನ್ನಯವಚನ | ಸಲ್ಲಿಪೆನು ಮೋಹನ | ಇಲ್ಲೈ
ಯಿರಲೆನ್ನಮನ | ವಲ್ಲದೇವೇ ||

ಮಾರ :—ಕಾಂತೆ ತ್ಯಜಿಸೀಗ್ರಾಮ ವಾಸವನ್ನು
ಕಾಂತಾರವನ್ನು ನಾವು ಸೇರುತಿನ್ನು

ಶಾಂತಮಾನಸರಾಗಿ ಶಿವಚರಣವನ್ನು
ಚಿಂತಿಸುತ ನೂಕುವೆವು ಕಾಲವನ್ನು ||

ಮಾರಿ :—ಪ್ರಾಣಪದಕ, ತಮ್ಮ ಅಪ್ಪಣೆಯಂತೆ ನಡೆಯಲು ಸಿದ್ಧಳಾಗಿದ್ದೇನೆ. ನಾಳೆಯದಿನವೇ ನಮ್ಮ ದನಕರುಗಳನ್ನೂ ಕಾಳು ಕಡ್ಡಿಗಳನ್ನೂ ಸಾಗಿಸಿಕೊಂಡು ಇಲ್ಲಿಂದ ಹೊರಟು ಅಡವಿಯನ್ನು ಸೇರೋಣ. ನಮಗೇನು ಭಯ? ಪಟ್ಟೆಯಿದ್ದಲ್ಲಿಯೇ ಪಟ್ಟಣವಷ್ಟೇ ?

ಮಾರ :—ನಿಜ, ಸಖೀಮಣಿ, ನೀನು ಅಡವಿಯಲ್ಲಾದರೂ ನಮ್ಮ ವ್ರತವನ್ನು ಮರೆತೀಯೆ ? ಮರೆತಾದರೂ ಒಂದು ಪ್ರಾಣಿಗೆ ಒಂದು ತುತ್ತು ಅನ್ನವನ್ನಿಟ್ಟೀಯೆ ? ಒಂದು ಹಿಡಿ ಕಾಳನ್ನು ಹಾಕೀಯೆ ? ಜೋಕೆ ? ಮನೆಮಾರುಗಳು ಹಾಳಾದರಾಗಲಿ, ಪ್ರಾಣವೇ ಹೋಗಲಿ. ವ್ರತಭಂಗವು ಮಾತ್ರ ಆಗಕೂಡದು.

ಮಾರಿ :—ಕಾಂತ, ಈ ವಿಷಯದಲ್ಲಿ ನನಗೆ ಹೆಚ್ಚಿಗೆ ಹೇಳಬೇಕಾದ್ದೇ ಇಲ್ಲ. ನಾನು ತಮಗೆ ತಕ್ಕ ಪತ್ನಿಯೇ ಅಲ್ಲವೇ ?

ಮಾರ :—ಸರಿ, ಹಾಗಾದರೆ, ಇಂದಿನಿಂದ ನನಗೆ ಇಕ್ಕದಮಾರನೆಂದೂ ನಿನಗೆ ಕೊಡದ ಮಾರಿಯೆಂದೂ ಹೆಸರುಗಳನ್ನಿಟ್ಟುಕೊಳ್ಳೋಣ. ಅದನ್ನು ಕೇಳಿಬಿಟ್ಟರೆ ಸಾಕು. ನಮ್ಮ ಗುಣಾತಿಶಯಗಳು ತಾವಾಗಿಯೇ ಇತರರಿಗೆ ವ್ಯಕ್ತವಾಗುತ್ತವೆ. ನಮ್ಮ ಸಮೀಪಕ್ಕೇ ಯಾರೂ ಸುಳಿಯುವುದಿಲ್ಲ.

ಮಾರಿ :—ಅಡ್ಡಿಯೇನು? ಆಗಬಹುದು.

ಮಾರ :—ಮನೋಹರಿ, ನಾನು ಈ ದಾನಶೂನ್ಯ ವ್ರತವನ್ನೇ ಏಕೆ ಆರಿಸಿದ್ದೇನೆಂದು ನಿನಗೆ ತಿಳಿಯುವುದೆ ?

ಮಾರಿ :—ಇಲ್ಲವಲ್ಲಾ ! ಏಕೆ ?

ಮಾರ :—ಹೇಳುತ್ತೇನೆ ಕೇಳು. ಸಖಿ, ' ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೆ ' ಎಂಬಂತೆ ನಾವು ಮಾಡುವ ಅತಿಯಾದ ಪುಣ್ಯಪಾಪಗಳಿಗೆ ತಕ್ಕ ಫಲವನ್ನು ಕೊಡುವುದಕ್ಕಾಗಿ ಪರಮೇಶ್ವರನು ನಮ್ಮನ್ನು ನೋಡಬೇಕಾಗುವುದು. ಹಾಗೆ ಈಶ್ವರನ ದೃಷ್ಟಿ ಬಿದ್ದಮೇಲೆ ಮನುಷ್ಯನು ಮುಕ್ತನಾಗುವನಷ್ಟೆ ? ರಾವಣನ ವಿಷಯವನ್ನು ಯೋಚಿಸು. ಅವನು ಅತಿ ಪಾಪಿಯಾದ್ದರಿಂದಲ್ಲವೇ ಶ್ರೀಮನ್ನಾರಾಯಣನು ರಾಮಚಂದ್ರಾವತಾರ ಮಾಡಿ ಬಂದು ಅವನನ್ನು ಕೊಲ್ಲಬೇಕಾಯಿತು. ಸಾಕ್ಷಾತ್ಪರಮಾತ್ಮನಾದ ಶ್ರೀ ರಾಮನ ಬಾಣದಿಂದ ಹತನಾದ ರಾವಣನು ಖಂಡಿತವಾಗಿಯೂ ಮುಕ್ತನೇ ಸರಿ. ಹೀಗೆಯೇ ನಾವೂ ಅತಿ ಲೋಭಿಗಳಾದರೆ ಆಗ ಶಿವನು ಬಂದು ನಮ್ಮನ್ನುದ್ಧರಿಸುವನು. ಅತಿ ಲೋಭಿಗಳಾಗುವುದು ನಮಗೂ ಸುಲಭ. ಆದ್ದರಿಂದಲೇ ಈ ವ್ರತವನ್ನು ನಾನು ಕೈಕೊಂಡದ್ದು. '

ಮಾರಿ :—ಸರಿ ಸರಿ, ಈಗ ತಿಳಿಯಿತು. ನಡೆ, ಇನ್ನು ಪ್ರಕೃತ ಕಾರ್ಯಗಳನ್ನು ನೋಡೋಣ.

ಮಾರ :—ಹಾಗೆಯೇ ಆಗಲಿ. (ಹೊರಟುಹೋಗುವರು)

## ೨ನೆಯ ನೋಟ

(ಕೈಲಾಸದಲ್ಲಿ ಈಶ್ವರನ ಸಭೆ)

ಪ್ರಮಥರು :—

ವೃತ್ತ॥ ಭಜೇಹಂ ಸದಾ ಸಾಂಬಮಾನಂದ ಸಾಂದ್ರಂ |
ಅಜನ್ಮಾನ ಮಂಭೋಜ ಜಾತಾದಿವಂದ್ಯಂ ||
ಭುಜಂಗಾಕ್ಷ ಭಸ್ಮಾದಿಭಿರ್ಭೂಷಿತಾಂಗಂ ।
ನಿಜಾನಂದ ಮಗ್ನಂ ಭವಾನೀಶ ಮಾಡ್ಯಂ ॥
ಹರನಮಃಪಾರ್ವತೀ ಪತಯೇ ಹರಹರ ಮಹಾದೇವ.

ಈಶ್ವರ :—ಎಲೈ ನಂದಿ ಭೃಂಗಿ ಜಟಾದಿ ಪ್ರಮಥರಿರಾ, ನಿಮ್ಮ ಸ್ತೋತ್ರಕ್ಕೆ ಮೆಚ್ಚಿದೆನು. ಸಖಿ ಕಾತ್ಯಾಯಿನಿ, ನನಗೆ ಭಕ್ತರನ್ನು ಕಂಡರೆ ಪರಮಾನಂದ. ಅದರಲ್ಲಿಯೂ ಜ್ಞಾನಿಗಳಾದ ಭಕ್ತರಿಗಿಂತಲೂ ಮೂಢ ಭಕ್ತರಮೇಲೆಯೇ ಪ್ರೇಮವು ಹೆಚ್ಚು.

ಪಾರ್ವತಿ :—ಪ್ರಾಣನಾಥ, ಅಸದೃಶವಾದ ನಿನ್ನ ಲೀಲೆಯನ್ನು ಬಣ್ಣಿಸುವರಾರು. ಭಕ್ತನಾದ ಬಾಣಾಸುರನ ಬಾಗಿಲು ಕಾಯ್ದೆ. ಭಕ್ತನಾದ ಅರ್ಜುನನ ಕೂಡೆ ಯುದ್ಧಮಾಡಿ ನೀನೇ ಕೆಳಗೆ ಬಿದ್ದೆ. ಪರಮಭಕ್ತನಾದ ದಶಕಂಠನಿಗೆ ಆತ್ಮಲಿಂಗವನ್ನೂ ಮತ್ತು ನನ್ನನ್ನೂ ಕೊಟ್ಟುಬಿಟ್ಟೆ. ಎದುರುಬಿದ್ದ ತ್ರಿಪುರ ಜಲಂಧರ ಗಜಾಸುರರನ್ನು ಮೆಟ್ಟಿ ತುಳಿದೆ. ದಕ್ಷನನ್ನು ಧ್ವಂಸಮಾಡಿದೆ. ಮನೋಹರ, ನಿನ್ನ ಮಹಿಮೆಯನ್ನು ಬಣ್ಣಿಸಲು ಸ್ತ್ರೀಮಾತ್ರಳಾದ ನಾನೆಷ್ಟರವಳು. ನಿನ್ನಂತೆಯೇ ನನ್ನ ಸಹೋದರನಾದ ವಿಷ್ಣುವೂ ಸರ್ವಲೋಕವಂದ್ಯನಾಗಿರುವನು. ಇಂತಹ ಪತಿ ಸಹೋದರರನ್ನು ಪಡೆದ ನಾನೇ ಧನ್ಯಳು.

ಈಶ್ವರ :—(ಸ್ವಗತ) ಈಗ ಪಾರ್ವತಿಯನ್ನು ಕೆಣಕಿ ಕೋಪ ಬರುವಂತೆ ಮಾಡಿ ಆ ವಿನೋದವನ್ನೊಂದುಗಳಿಗೆ ನೋಡೋಣ. (ಪ್ರಕಾಶಂ) ದಾಕ್ಷಾಯಿಣಿ, ನಿಮ್ಮಣ್ಣನೂ ಸರ್ವಲೋಕ ವಂದ್ಯನೆಂದು ಹೇಳಿದೆಯಲ್ಲಾ, ಅದುಹೇಗೆ? ಇಂಥಾ ಮಾತನಾಡಬಹುದೆ ?

(ಸೀಸಪದ್ಯ)

ಇರಲೊಂದು ಮನೆಯಿಲ್ಲ | ಶರಧಿಯೊಳು ವಾಸಿಪನು |
ಸರಸಿರುಹ ನೇತ್ರೆಯೇಂ ಪೊಗಳ್ವೆಯವನ |

ಪಾರ್ವತಿ :— ಗಿರಿಶ ತವ ದಿವ್ಯಮಂ | ದಿರವೆಲ್ಲಿ ರಾಜಿಪುದು | ಗಿರಿಗಹ್ವರದೊಳಹುದ ಮರೆದೆಯೇನು ||

ಈಶ್ವರ :— ವಾಮನಾಕಾರದಿಂ । ಭೂಮಿಯೊಳ್ ಒಲಿಯ ಬೇ | ಡ್ದಾ ಮಹಾಮಹಿಮ ನಿಮ್ಮಣ್ಣನವನು ||

ಪಾರ್ವತಿ :—ದೇವದೇವನೆ ಬೊಮ್ಮ| ದೇವನ ಕಪಾಲದೊಳ | ಗಾವಗಂ ತಿರಿದುಣುವನಲ್ತೆ ನೀನು ||

ಈಶ್ವರ :— ಕುದುರೆಯಿಲ್ಲದೆ ಪೊಂದು | ಮುದಿಹದ್ದ ನೇರು ವನು । ಪದುಮಾಕ್ಷಿಯಿಂದೆನ್ನ | ಪದವನರ್ಚಿಸಿದಂ ॥

ಪಾರ್ವತಿ :— ಮುದಿಯೆತ್ತ ನೀನೇತ | ಕಧಿರೋಹಿಸುವೆ, ರಾಮ | ನಧಿಕ ಮಹಿಮೆಯ ಪಾಡಿ ಪೊಗಳಬೇಕೆ ॥

ಈಶ್ವರ :—ಸ್ಮರಬಾಣಘಾತ ಜ | ರ್ಝರನಾಗಿ ಬೃಂದೆಯನು ವರಿಸಿದನು | ಹರಿ ಅನಂಗನ ಗೆಲಿದೆ ನಾನು |

ಪಾರ್ವತಿ :—ಹರ, ಜಿತೇಂದ್ರಿಯನಾಗೆ । ವರಿಸಿದೆಯದೇಕೆನ್ನ । ಹರಿ ಬೃಂದೆಯನು ಕೂಡೆ ತರಿದೆ ಖಳನ ||

ಕಾಲರುದ್ರ :— ಎಲೈ ಭೃಂಗಿಯೇ, ಇದೇನು, ಲೋಕನಾಯಕರಾದ ಸಾಂಬಕಾತ್ಯಾಯಿನಿಯರು ಪಾಮರರಂತೆ ವಾದಮಾಡುತ್ತಿರುವರು. ಗೌರೀದೇವಿಯೇಕೆ ಈ ರೀತಿಯಾಗಿ ವಿಷ್ಣು ಪಕ್ಷವನ್ನು ಹಿಡಿದಿರುವಳೋ ಕಾಣೆನಲ್ಲಾ.

ಭೃಂಗಿ :—ಮಿತ್ರ, ಅವರು ಕ್ರೋಧದಿಂದ ವ್ಯಾಜ್ಯಮಾಡುವರೆಂದು ತಿಳಿದಿರುವಿಯೇನು ? ಹಾಗಲ್ಲ. ಅವರಿಗಿದು ಕೇವಲ ವಿನೋದ. ಅಲ್ಲದೆ ಪಾಮರರಾದ ನಮಗೆ ಹರಿಹರರಿಗಿರುವ ತಾರತಮ್ಯವನ್ನು ತೋರಿಸುವ ಪಾರ. ಇದು ಕೊನೆಗಾಣುವವರೆಗೂ ಸುಮ್ಮನಿರು.

ಈಶ್ವರ :—

ತೇಟಗೀತ॥ ಬಲಿಯ ಬಾಗಿಲ ಕಾಯ್ದ ದೀನ ನವನು |
ಛಲದಿಂದ ಒಣ್ಣೊಪುದದೇಕೆ ನೀನು ||

ಪಾರ್ವತಿ :—ಬಾಣನರಮನೆಯ ಬಾಗಿಲ ಕಾಯ್ದುದನ್ನು |
ಬಾಣ ನೀ ಮರೆದು ಹರಿಯನು ಬೈದರೇನು ||

ಕಾಲರುದ್ರ :—ಭೃಂಗಿ, ಇದೇನು ! ಈ ವಾದವು ಕೊನೆಗಾಣುವಂತೆಯೇ ಇಲ್ಲವಲ್ಲಾ. ಪಾರ್ವತಿಯೇಕೆ ಹಿಡಿದ ಹಟವನ್ನು ಬಿಡದೆ ಇರಬಹುದು.

ಭೃಂಗಿ :— ಮಿತ್ರ, ಲೋಕಮಾತೆಯಾದ ಸರ್ವಮಂಗಳಾ ದೇವಿಯಲ್ಲಿ ದೋಷವನ್ನಾರೋಪಿಸಬೇಡ. ಸ್ವಲ್ಪ ತಡಿ, ಗೌರಿದೇವಿಯ ವಾದದ ಫಲವು ನಿನಗೇ ನಿದರ್ಶನವಾಗುವುದು.

ಈಶ್ವರ :—ಕಾಂತಾಮಣಿ, ಉಮಾ.

ಪಾರ್ವತಿ :—ನಾಥ, ದಯವಿಟ್ಟು ನನ್ನ ಗೋಜಿಗೆ ಬರಬೇಡಿ. ಅಣ್ಣನಾದ ಹರಿಯೇ ನಿಂದ್ಯನಾದಮೇಲೆ ನನ್ನ ಯೋಗ್ಯತೆ ತಾನೇ ಎಷ್ಟು ಮಾತ್ರದ್ದು. ಇಂಥಾ ಹೀನಳಾದ ನನ್ನಿಂದ ತಮಗಾಗಬೇಕಾದುದೇನು. ಇನ್ನುಮೇಲೆ ತಮಗೆ ಇಷ್ಟ ಬಂದವರನ್ನು ತಾವು ಸಮೀಪದಲ್ಲಿಟ್ಟುಕೊಳ್ಳಬಹುದು. ನಾನು ಹೊರಟುಹೋಗುವೆನು (ಎದ್ದು ಹೊರಡುವಳು)

ಈಶ್ವರ :—(ಕೈ ಹಿಡಿದು) ಪ್ರಾಣಪ್ರಿಯೆ, ತಡೆತಡೆ, ಎಲ್ಲಿಗೆ ಹೋಗುವೆ ?

ಕಂದ॥ ಸರಸೋಕ್ತಿಗೆ ನಾಂ ನುಡಿದುದ |
ಪರಿಗಣಿಸದೆ ಕಮಲನೇತ್ರೆ ಕೋಪಿಸುವರೆ ಪೇಳ್ ||
ಹರಿಯೆನ್ನಿಂದ ಲಭಿನ್ನಂ |
ಹರಿಹರರೊಳ್ ಭೇದವೆಣಿಸೆ ನರಕವೆ ಸತ್ಯಂ ||

ಗಿರಿಜಾ, ನಾನು ಹಾಸ್ಯಕ್ಕಾಗಿ ಹೇಳಿದುದನ್ನು ಸತ್ಯವೆಂದು ಭಾವಿಸಿ ಕೋಪಗೊಳ್ಳಬಹುದೆ ? ನಾನೂ ವಿಷ್ಣುವೂ ಅಭಿನ್ನರಲ್ಲವೆ ? ಘಂಟಾಕರ್ಣನ ಕಥೆಯನ್ನರಿಯೆಯಾ? ನಮ್ಮಲ್ಲಿ ಭೇದವೆಣಿಸಲು ನೀನೇನು ಪಾಮರಳೆ ?

ಪಾರ್ವತಿ :—ಪ್ರಭು, ನಾನು ನಿಜವಾಗಿಯೂ ಕೋಪಗೊಳ್ಳುವೆನೆ ? ನೀವೂ ವಿಷ್ಣುವೂ ಅಭಿನ್ನರೆಂಬುವುದು ನಿಮ್ಮ ಬಾಯಿಂದಲೇ ಹೊರಬಿದ್ದರೆ ಪ್ರಮಥರಲ್ಲಿ ಕೆಲವರಿಗಿರುವ ಸಂಶಯವು ಪರಿಹಾರವಾಗುವುದೆಂದು ಈ ರೀತಿ ಕೋಪಗೊಂಡಂತೆ ನಟಿಸಿದೆನು. ಈ ಅಪರಾಧಕ್ಕಾಗಿ ನನ್ನನ್ನು ಮನ್ನಿಸಬೇಕಾಗಿ ಬೇಡುತ್ತೇನೆ.

ಭೃಂಗಿ :—ಕಾಲರುದ್ರಾ, ನೋಡಿದೆಯಾ ಪಾರ್ವತೀ ಪರಮೇಶ್ವರರ ವಾದದ ಪರಿಣಾಮವನ್ನು. ಮೂಢರಾದ ನಮಗೆ ಹರಿಹರರಿಗೆ ಭೇದವಿಲ್ಲವೆಂಬುದನ್ನು ತೋರಿಸುವುದಕ್ಕಾಗಿಯೇ ಈ ಕಪಟ ವ್ಯಾಜ್ಯವನ್ನು ಅವರು ಹೂಡಿದ್ದು. ಇದನ್ನರಿಯದೆ ಪಾಮರರು ಹರಿಹರರಲ್ಲಿ ಭೇದವೆಣಿಸಿ ಅನ್ಯಾಯವಾಗಿ ಅಧೋಗತಿಯನ್ನು ಹೊಂದುವರು.

ನಾರದ :—(ಪ್ರವೇಶಿಸಿ)

(ಪಂಚಚಾಮರ ವೃತ್ತ)

ಹರೇ ಪರೇಶ ಪಾಪನಾಶ ಪಾಹಿ ಪಾವನಾತ್ಮಕ |
ಸುರಾದಿ ಜೀವಕೋಟಿ ಬೃಂದವಂದ್ಯ ಶೈಲಧಾರಕ |
ಸರೋಜಜಾತಜಾತ ತಾತ, ಭೂತನಾಥ ಪ್ರೀತಿದಾಯಕ |
ಸ್ಮರಾಮಿ ದಿವ್ಯಪಾದ ಕಂಜಯುಗ್ಮ ಮಾರ್ತಿ ನಾಶಕ ||

ನಾರಾಯಣ ! ನಾರಾಯಣ ! ವೈಕುಂಠವಾಸ! ನಾನು ಪ್ರಪಂಚವನ್ನೆಲ್ಲಾ ಸುತ್ತಿಕೊಂಡು ಪರಮೇಶ್ವರನ ಪವಿತ್ರಾಲಯವಾದ ಈ ಕೈಲಾಸಗಿರಿಗೆ ಬಂದೆನು. ಈ ಕಲಿಯುಗದಲ್ಲಿಯೂ ಸಹ ಸಜ್ಜನರು ಅಲ್ಲಲ್ಲಿ ಇನ್ನೂ ಇದ್ದಾರೆ. ಅವರಲ್ಲಿಯೂ ಇಕ್ಕದಮಾರನು ಬಹು ವಿಲಕ್ಷಣನಾದ ಸಜ್ಜನ. ಅವನ ವ್ರತವೋ ! ಮತ್ತೂ ವಿಲಕ್ಷಣವಾದದ್ದು. ಆಗಲಿ, ಈ ವ್ರತದ ಮಹಿಮೆಯಿಂದಲೇ ಅವನಿಗೆ ಮುಕ್ತಿ ಲಾಭವಾಗುವುದು. ಇದಕ್ಕೆ ನಾನೇ ಸಹಾಯಕನಾಗುವೆನು (ತಿರುಗಿ ನೋಡಿ) ಜಗತ್ಪ್ರಭು, ಜಗಜ್ಜನನಿ, ನಾರದನು ವಂದಿಸುವನು.

ಪರ-ಪಾ.—ಕಲ್ಯಾಣಮಸ್ತು, ನಾರದ. ಬಾ, ಈ ಪೀಠದಲ್ಲಿ ಮಂಡಿಸು.

ನಾರದ.—ಅಪ್ಪಣೆಯಂತಾಗಲಿ. (ಕುಳಿತುಕೊಳ್ಳುವನು)

ಈಶ್ವರ:—ನಾರದ, ಈಗ ಎಲ್ಲಿಂದ ಬಂದೆ ? ಯಾವ ಯಾವ ಲೋಕಗಳಲ್ಲಿ ಏನೇನು ವಿಶೇಷ ? ತ್ರಿಲೋಕ ಸಂಚಾರಿಯಾದ ನಿನಗೆ ತಿಳಿಯದೆ ಇರುವ ವಿಷಯವೇ ಇಲ್ಲವಷ್ಟೆ ?

ನಾರದ:—ದೇವಾ, ನಾನು ಸ್ವರ್ಗ ಮರ್ತ್ಯ ಪಾತಾಳಗಳಲ್ಲಿ ಅಲ್ಲಲ್ಲಿ ಸಂಚರಿಸಿ ಈಗತಾನೇ ಇಲ್ಲಿಗೆ ಬಂದೆನು. ಎಲ್ಲಿಯೂ ಯಾವ ವಿಧವಾದ ವಿಶೇಷವೂ ಕಂಡುಬರಲಿಲ್ಲ. ಆದರೆ ಭೂಲೋಕದಲ್ಲಿ ಮಾತ್ರ ಒಬ್ಬ ವಿಲಕ್ಷಣ ವ್ಯಕ್ತಿಯನ್ನು ನೋಡಿದೆನು.

ಪಾರ್ವತಿ:—ವತ್ಸ, ಅವನು ಯಾರು ? ಅವನ ವಿಷಯವೇನು?

ನಾರದ:—ಮಾತೆ, ಅವನೊಬ್ಬ ಪರಮ ಲೋಭಿ. ಅವನಿಂದ ದಾನವನ್ನೇ ಆಗಲಿ, ದುಡಿದ ಕೂಲಿಯನ್ನೇ ಆಗಲಿ ಹೊಂದಿದವರು ಈ ಪ್ರಪಂಚದಲ್ಲಿಯೇ ಇಲ್ಲ. ಅವನು, ಇದೋ, ಈ ಮೃತ್ಯುಂಜಯನ ಪರಮ ಭಕ್ತ.

ಪಾರ್ವತಿ:—ನಾಥ, ಆ ಪರಮ ಲೋಭಿಯು ತಮ್ಮ ಭಕ್ತನಂತೆ ! (ನಗುತ್ತಾ) ಇವರ ಭಕ್ತರೆಲ್ಲರೂ ವಿಲಕ್ಷಣವ್ಯಕ್ತಿಗಳೇ. ರಾವಣನೊಬ್ಬ ದುರ್ಮಾರ್ಗ. ಭಸ್ಮಾಸುರನು ಗುರುವಿಗೇ ತಿರುಮಂತ್ರವನ್ನು ಹೂಡಿದವನು. ಜಲಂಧರನು ಸ್ವಾಮಿಯನ್ನೇ ನಡುಗಿಸಿದವನು. ಈಗ ನೀನು ಹೇಳುವ ವ್ಯಕ್ತಿಯು ಪರಮ ಲೋಭಿ. ಎಲ್ಲವೂ ಬಹಳ ಚೆನ್ನಾಗಿದೆ.

ನಾರದ:—ಅಂಬಾ, ಪ್ರಪಂಚದಲ್ಲಿ ಒಬ್ಬೊಬ್ಬರದೊಂದೊಂದು ವಿಧ. ಎಲ್ಲರೂ ಒಂದೇರೀತಿಯಾಗಿರಲಾದೀತೇ ? ಲೋಕದಲ್ಲಿ ಒಳ್ಳೇ ಮಕ್ಕಳೊಂದಿಗೆ ಕೆಟ್ಟ ಮಕ್ಕಳೂ ಹುಟ್ಟುವರು. ಆದರೆ ಹೆತ್ತವರಿಗೆ ಇಬ್ಬರೂ ಒಂದೇ ಸಮನಲ್ಲವೇ.

ಈಶ್ವರ:—ನಾರದ, ಈ ವ್ಯಂಗ್ಯೋಕ್ತಿಗಳಂತಿರಲಿ. ಆ ಭಕ್ತನ ವಾಸಸ್ಥಾನವಾವುದು. ಅವನ ಹೆಸರೇನು ? ಅವನ ರೀತಿ ನೀತಿಗಳೆಂತಹುವು. ಹೇಳು.

ನಾರದ:—ದೇವ.

ಕಂದ|| ಇಕ್ಕದಮಾರನೆನುತ್ತಂ | ಪ್ರಖ್ಯಾತಿಯನಾಂತಿರುವನು
ಭೂಮೀತಲದೊಳ್ || ತಕ್ಕ ಸತಿಯವನಿಗಿರುವಳು |
ವಕ್ಕಣಿಪರು ಕೊಡದಮಾರಿಯೆಂದೆನುತವಳಂ ||

ಈ ದಂಪತಿಗಳು ದಾನಶೂನ್ಯವೆಂಬ ಹೆಸರಿನ ವ್ರತವನ್ನು ಕೈಗೊಂಡು ಯಾರ್ಯಾರಿಗೂ ಏನೇನನ್ನೂ ಕೊಡದೆ ಇರುವರು. ಶಂಕರ, ನೀನೇ ಹೋಗಿ ಕೇಳಿದರೂ ಅವರು ಬೇರೆ ಒಂದು ಕಾಳು ಧಾನ್ಯವನ್ನೇ ಆಗಲಿ, ಒಂದು ಕುರುಡು ಕವಡೆಯನ್ನೇ ಆಗಲಿ ಕೊಡರು.

ಪಾರ್ವತಿ:—ಇದು ಕೇವಲ ನಗೆಗೇಡಾದ ಮಾತು. ಆರ್ಯಪುತ್ರ! ತಾವು ಏನಾದರೂ ಸಾಹಸಮಾಡಿ ಅವನಿಂದ ಭಿಕ್ಷವನ್ನು ತರುವ ಪ್ರಯತ್ನವನ್ನು ಮಾಡಲೇಬೇಕು. ಇಲ್ಲದಿದ್ದರೆ ಶಿವನ ಭಕ್ತನು ಪರಮ ಲುಬ್ಧನೆಂಬ ಅಪಖ್ಯಾತಿ ಬಂದೀತು.

ಈಶ್ವರ:—ದೇವೀ, ಚಿಂತಿಸಬೇಡ. ನಾನೇ ಹೋಗಿ ಆ ಇಕ್ಕದಮಾರನಿಂದ ಭಿಕ್ಷವನ್ನು ತರುತ್ತೇನೆ.

ನಾರದ:—ಸಾಂಬ, ಇದು ನಿನ್ನಿಂದ ಸಾಧ್ಯವಿಲ್ಲ. ಆ ಇಕ್ಕದಮಾರ ಕೊಡದಮಾರಿಯರೇನು ಸಾಮಾನ್ಯರಲ್ಲ. ಪ್ರಾಣವೇ ಹೋದರೂ ಅವರು ಕೈಗೊಂಡಿರುವ ವ್ರತವನ್ನು ಬಿಡಲಾರರು. ನೀನು ಹೋದಾಗ್ಯೂ ವಿಫಲನಾಗಿ ಹಿಂದಿರುಗುವುದೇ ಖಂಡಿತ. ಆದ್ದರಿಂದ ವೃಥಾ ಆಯಾಸಪಡಬೇಡವೆಂತ ಕೇಳಿಕೊಳ್ಳುತ್ತೇನೆ.

ಈಶ್ವರ:—ನಾರದ, ಇಷ್ಟು ಗಟ್ಟಿಗನಾದ ನನ್ನ ಭಕ್ತ ನಿನ್ನೆಂಥವನಿರಬಹುದು. ಪರೀಕ್ಷಿಸಿಯೇ ಬಿಡುತ್ತೇನೆ.

ನಾರದ:—ದೇವಾ ನೀನೇನೋ ಪರೀಕ್ಷಿಸಬಹುದು. ಆದರೆ ಫಲಿತಾಂಶವು ಮಟ್ಟಿಗೆ ನಿನ್ನ ಇಚ್ಛೆಗೆ ವ್ಯತಿರಿಕ್ತವಾಗುವುದು.

ಪಾರ್ವತಿ:—ಜೀವರತ್ನ, ಈ ನಾರದನಿಗೆ ತಮ್ಮ ಶಕ್ತಿ ಸಾಹಸಗಳಲ್ಲಿ ಅನುಮಾನವಿರುವಂತೆ ತೋರುತ್ತದೆ. ಏನಾದರೂ ಆಗಲಿ. ತಾವು ಆ ಮಾರನಿಂದ ಭಿಕ್ಷವನ್ನು ತಮ್ಮ ಸರ್ವಸಾಹಸದಿಂದಲೂ ತರಲೇಬೇಕು. ಹಾಗಾದರೆ ಇವನಿಗೆ ಪರಮೇಶ್ವರನು ದೊಡ್ಡವನೋ ಅಥವಾ ಭಕ್ತನು ದೊಡ್ಡವನೋ ತಿಳಿಯುವುದು.

ಈಶ್ವರ:—ನಿಜ, ರಮಣೀರತ್ನ.

ಕಂದ॥ ತೆರಳುವೆನೀಗಲೆ
ಪಾರ್ವತಿ :— ಪೋಗೈ ।
ನಾರದ :— ಬರಿದೇತಕೆ,
ಈಶ್ವರ :— . ಬಿಡೆನು
ಪಾರ್ವತಿ :— ಬಿಡಲು ಸುರರೇಂ ನಗರೇ ॥
ನಾರದ :—ತರವಲ್ಲಾತುರ,
ಪಾರ್ವತಿ :— ಹರತಾಂ ॥
ಪಿರಿದೈ,
ಈಶ್ವರ :— ಅಹುದಹುದು ಪೋಪೆನೀಗಲೆ ಜವದಿಂ ॥

ನಾರದ :—ದೇವಾ, ವೃಥಾ ಹರದಿಂದ ಪ್ರಯೋಜನವಿಲ್ಲ. ನೀನು ಆ ಮಾರನಲ್ಲಿಗೆ ಹೋದದ್ದೇ ಆದರೆ ಭಂಗಪಟ್ಟು ಬರುವುದೇ ಖಂಡಿತ. ಆದ್ದರಿಂದ ಹೋಗಬೇಡ.

ಈಶ್ವರ :— ನಾರದ, ನನ್ನನ್ನು ತಡೆಯಬೇಡ. ಅವನಿಂದ ಭಿಕ್ಷವನ್ನು ನಾನು ತಂದೇಬಿಡುತ್ತೇನೆ. ಅವನ ಸತ್ವವೆಷ್ಟಿರುವುದೋ ನೋಡೋಣ. ಈಗಲೇ ಜಂಗಮವೇಷಧಾರಿಯಾಗಿ ಹೊರಡುವೆನು. (ಹೋಗುವನು)

ಪಾರ್ವತಿ :—ನಾರದ, ಪ್ರಾಣಕಾಂತನು ಇಕ್ಕದಮಾರನನ್ನು ಛಲಿಸಲು ಹೊರಟರು. ಅವರ ಉದ್ದೇಶ್ಯವು ನೇರವೇರುವಂತೆ ಮಂಗಳವ್ರತಗಳನ್ನಾಚರಿಸಲು ನಾನೂ ಹೊರಡುವೆನು. ನಿನಗೆ ಮಂಗಳವಾಗಲಿ ಹೋಗಿಬಾ(ಹೋಗುವಳು)

ನಾರದ :—ಇದೀಗ ನಾರದನ ಲೀಲೆ. 'ನಾರದೋ ಕಲಹಪ್ರಿಯಃ' ಎಂದು ಕೆಲವರು ನನಗೆ ಜಗಳಗಂಟನೆಂದು ಹೆಸರಿಡುತ್ತಾರೆ. ಆದರೆ ನಾರದನೊಡ್ಡಿದ ವ್ಯಾಜ್ಯದ ಪರಿಣಾಮವನ್ನು ಯೋಚಿಸುವವರು ಮಾತ್ರ ವಿರಳ. ಈಗ ನಾನು ಒಡ್ಡಿದಂಥ ರಗಳೆಗಳನ್ನೇ ಯಾವಾಗಲೂ ಒಡ್ಡುವುದು. ಇದರಿಂದ ನಷ್ಟವೇನು ? ಹರಿಯಾಗಲಿ ಹರನಾಗಲಿ ದೇಶಾಂತರದಿಂದ ಭೂಲೋಕಕ್ಕೆ ಹೋಗಬೇಕಾಗುತ್ತದೆ. ಹಾಗೆ ಅವರು ಸಂಚಾರಮಾಡದಿದ್ದರೆ, ಪಾಮರರಾದ ನರಜೀವರು ಹೇಗೆ ಉದ್ಧಾರಬೇಕು. ಆಗಲಿ, ಈಗ ಪರಮೇಶ್ವರನನ್ನು ಅನುಸರಿಸಿ ಹೋಗಿ ಆತನನ್ನು ಇನ್ನೂ ಛಲಿಸಿ ಕಡೆಗೂ ಇಕ್ಕದಮಾರನು ಉದ್ಧಾರವಾಗುವಂತೆ ಮಾಡುವೆನು.

(ಹೋಗುವನು)

## ೩ನೆಯ ಪ್ರವೇಶ

ಪ್ರವೇಶ—ಸತ್ಯಬೋಧಾಚಾರ್ ಮತ್ತು ಕೃಷ್ಣರಾವ್.

(ಗ್ರಾಮದ ಬೀದಿಯಲ್ಲಿ)

ಸತ್ಯ :— ಏನಯ್ಯಾ, ಕೃಷ್ಣರಾವ್. ಕೈಯಲ್ಲಿ ಯಾವಾಗಲೂ ಪುಸ್ತಕವನ್ನು ಹಿಡಿದೇ ಇರುತ್ತಿ. ಈಗ ನೀನು ನೋಡುತ್ತಿರುವುದು ಯಾವ ಪುಸ್ತಕ ?

ಕೃಷ್ಣ:—ಆಚಾರ್ಯ ಸ್ವಾಮಿಗಳೇ, ಇದು ಶರಣಲೀಲಾಮೃತ.

ಸತ್ಯ :—ಏನು ! ಶರಣ-ಲೀಲ-ಅಮೃತ. ಏನಯ್ಯಾ, ಯಾವ ಶರಣರ, ಯಾವ ಲೀಲೆಯ ಎಂಥಾ ಅಮೃತ ?

ಕೃಷ್ಣ :— ಇದು ಶಿವಶರಣರ ವಿಚಿತ್ರಲೀಲೆಯ ಬೋಧಾಮೃತ.

ಸತ್ಯ :—ಇದು ಯಾವ ಮತಕ್ಕೆ ಸಂಬಂಧಪಟ್ಟಿದ್ದು ?

ಕೃಷ್ಣ :—ವೀರಶೈವ ಮತಕ್ಕೆ.

ಸತ್ಯ :—ವೀರಶೈವ ಮತ ? ಅದಾವ ಮತವಯ್ಯ? ಬ್ರಹ್ಮಕ್ಷತ್ರ ವೈಶ್ಯ ಶೂದ್ರರಲ್ಲಿ ಯಾವುದಕ್ಕೂ ಸಂಬಂಧಪಟ್ಟ ಹಾಗೆ ಕಾಣಿಸುವುದಿಲ್ಲವಲ್ಲಾ! ಇದೊಂದು ನವೀನ ಹೂಣಮತವೋ ?

ಕೃಷ್ಣ:—ಆಚಾರ್ಯರೇ, ಇದು ಬಸವೇಶ್ವರನಿಂದ ಉದ್ಧಾರ ಮಾಡಲ್ಪಟ್ಟ ಆರಾಧ್ಯ ಮತ. ಈಗಲೂ ಈ ಮತದಲ್ಲಿ ಹಲವರು ಯಜ್ಞೋಪವೀತ ಧಾರಣೆಮಾಡಿದ್ದಾರೆ. ನಿಮ್ಮಂಥಾ ದೊಡ್ಡಾಚಾರ್ಯರು ಅವರ ಮನೆಗಳಲ್ಲಿ ತಿಂದು ತೇಗಿ ಮೆಲುಕುಹಾಕುತ್ತಾರೆ.

ಸತ್ಯ :—ಕೃಷ್ಣ, ಈಗಿನ ಕಾಲದ ಹುಡುಗರು ತೀರಾ ಕೆಟ್ಟು ಹೋದರು. ಸ್ವಮತ ಗ್ರಂಥಗಳ ಗಂಧವೇ ಇಲ್ಲದಿದ್ದಾಗ್ಯೂ ಪರಮತ ಗ್ರಂಥಗಳನ್ನು ಓದುವುದಕ್ಕಾರಂಭಿಸಿಬಿಟ್ಟರು. ಮನೆದೇವರು ಕಲ್ಲಾಯಿತು. ಗುಡ್ಡದ ಕಲ್ಲಿಗೆ ಕ್ಷೀರಾಭಿಷೇಕ.

ಕೃಷ್ಣ :—ಆಚಾರ್ಯ ಸ್ವಾಮಿಗಳೇ, ಪರಮತ ಗ್ರಂಥಗಳನ್ನೋದಬಾರದೆಂದು ಯಾವ ಶಾಸ್ತ್ರದಲ್ಲಿ ಹೇಳಿದೆ. ಅಪ್ಪಣೆಯಾಗಲಿ.

ಸತ್ಯ .—ಅಯ್ಯಾ! ನೀನು ಈಗಿನ ನವನಾಗರೀಕ ಸಂಗಡಕ್ಕೆ ಸೇರಿದವನು. ನಿನಗೆ ಸರಿಯಾದ ಉತ್ತರವನ್ನು ಕೊಡಲು ಗೊಡ್ಡು ವೈದಿಕನಾದ ನನ್ನಿಂದಾದೀತೆ? ವೀರಶೈವ ಗ್ರಂಥಗಳನ್ನು ಬ್ರಾಹ್ಮಣನಾದ ನೀನೇತಕ್ಕಯ್ಯಾ ಓದುತ್ತೀಯೆ ? ನಿನಗದರಿಂದ ಏನು ಪ್ರಯೋಜನ ?

ಕೃಷ್ಣ:—ಆಚಾರ್ಯರೇ, ಬ್ರಾಹ್ಮಣರಾದ ತಾವು ಕ್ಷತ್ರಿಯನಾದ ರಾಮನ ಕಥೆಯನ್ನೂ ಮತ್ತು ಗೊಲ್ಲರವನಾದ ಕೃಷ್ಣನ ಕಥೆಯನ್ನೂ ಒಳಗೊಂಡಿರುವ ರಾಮಾಯಣ ಭಾಗವತಗಳನ್ನೇಕೆ ಪಠಣಮಾಡುತ್ತೀರಿ. ಅದರಿಂದ ನಿಮಗಾಗುವ ಪುರುಷಾರ್ಥವೇನು ?

ಸತ್ಯ :—ರಾಮಕೃಷ್ಣರು ವಿಷ್ಣುವಿನ ಅವತಾರಗಳು. ಅವರ ಚರಿತ್ರೆಯನ್ನೋದಿದರೆ ಆ ಮಹಾ ವಿಷ್ಣುವಿನ ದಿವ್ಯ ಮಹಿಮೆಯನ್ನು ಹೊಗಳಿದಂತಾಯಿತು.

ಕೃಷ್ಣ :—ಬಸವೇಶ್ವರನೇ ಮೊದಲಾದ ಶಿವಶರಣರು ಸಾಕ್ಷಾತ್ ಪರಮೇಶ್ವರನ ಅವತಾರಗಳು. ಅವರ ಚರಿತ್ರೆಗಳನ್ನೋದಿದರೆ ಆ ಕೈಲಾಸದೊಡೆಯನ ಮಹಾಮಹಿಮೆಯನ್ನು ಕೊಂಡಾಡಿದಂತಾಯಿತು.

ಸತ್ಯ :—ಕೃಷ್ಣ, ನೀನು ಶುದ್ಧ ವಿತಂಡವಾದಿ.

ಕೃಷ್ಣ :—ಆಚಾರ್ಯರೇ, ತಾವು ಕೇವಲ ನಿರರ್ಥಕ ತಾರ್ಕಿಕರು.

ಸತ್ಯ :—ಹೋಗಲಯ್ಯಾ ಬಿಡು. ವಾದದಿಂದ ನಮಗೇನು ಪ್ರಯೋಜನ ? ವೀರಶೈವರೆಂದು ಹೇಳಿದೆಯಲ್ಲಾ ಅವರ ತತ್ವವೇನು ? ಅವರ ಆಚಾರ ವಿಚಾರಗಳೆಂತಹವು ? ಸ್ವಲ್ಪ ಹೇಳು.

ಕೃಷ್ಣ :—ಅವರ ಆಚಾರ ವಿಚಾರಗಳು ಬಹು ಭಾಗವೆಲ್ಲಾ ಬ್ರಾಹ್ಮಣರಂತೆಯೇ. 'ಹರಮುನಿದರ ಗುರು ಕಾಯ್ವನು ಗುರುಮುನಿದರೆ ಹರಿಹರರು ಕಾಯಲಾರರು' ಎಂಬುದೇ ಅವರ ಮತದ ಮುಖ್ಯ ತತ್ವ. ಶಿವನೇ ದೊಡ್ಡ ದೇವರೆಂದು ಅವರ ನಂಬುಗೆ.

ಸತ್ಯ :— ಏನಯ್ಯಾ, ಹರಿಯೇ ದೊಡ್ಡವನಲ್ಲವೇ 'ಹರೇರ್ನಾಮೈವ ನಾಮೈವ | ನಾಮೈವ ಮಮಜೀವನಂ॥ ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ' ಎಂದು ಪರಮ ಹರಿಭಕ್ತನಾದ ವಿದುರನು ಹೇಳಿಲ್ಲವೇ ?

ಕೃಷ್ಣ :— ಆಚಾರ್ಯರೇ 'ಶರಣಂ ಶರಣೇಂದು ಶೇಖರ | ಸ್ಮರಣಂ ಮೇ ಗಿರಿರಾಜ ಕನ್ಯಕಾ ॥ ಶರಣಂ ಪುನರೇವ ತಾವುಭೌ । ಶರಣಂ ನಾನ್ಯದುಪೈಮಿ ದೈವತಂ' ಎಂದು ಪರಮ ಶಿವಭಕ್ತನಾದ ಉಪಮನ್ಯುವು ಹೇಳಿದ್ದಾನೆ. ಶಿವನೇ ದೊಡ್ಡವನು.

ಸತ್ಯ :—ನೀನೂ ಸ್ಮಾರ್ತ. ಅದಕ್ಕೇ ಶಿವನನ್ನು ಹೊಗಳುತ್ತೀ.

ಕೃಷ್ಣ :—ನೀವು ವೈಷ್ಣವರು. ಅದಕ್ಕೇ ವಿಷ್ಣುವನ್ನು ಹೊಗಳುತ್ತೀರಿ.

ಸತ್ಯ :—ಏನಯ್ಯಾ, ಹಾಗಾದರೆ ನೀನೇ ಹೇಳು. ಯಾರು ದೊಡ್ಡವರು ? ಹರಿಯೋ ಹರನೋ ?

ಕೃಷ್ಣ :—ಆಚಾರ್ಯರೇ, ಸೂರ್ಯ ಕಿರಣಗಳಲ್ಲಿ ಹೆಚ್ಚು ಕಡಿಮೆಯುಂಟೆ ? ಇದಂಥಾ ಪ್ರಶ್ನೆ ?

ಕೃಷ್ಣ :—ಸೂರ್ಯ ಕಿರಣಗಳಲ್ಲಿ ಭೇದವಿಲ್ಲದೆ ಇದ್ದಮೇಲೆ ಹರಿಹರರಲ್ಲಿಯೂ ಭೇದವಿಲ್ಲ. ಹೇಗೆ ಒಬ್ಬನೇ ಸೂರ್ಯನಿಂದ ನಾನಾಕಿರಣಗಳು ಬೇರೆ ಬೇರೆ ದಿಕ್ಕುಗಳಲ್ಲಿ ಹರಡಿ ಸುತ್ತವೆಯೋ ಹಾಗೆಯೇ ಅಖಂಡ ಚೈತನ್ಯಾತ್ಮಕನಾದ ಆ ಪರಮಾತ್ಮನ ತೇಜೋಬಿಂದುಗಳು, ಹರಿ ಹರ ವಿರಂಚಿ ಮೊದಲಾದ ನಾನಾರೂಪಗಳಾಗಿ ವ್ಯಾಪಿಸಿವೆ. ಇವುಗಳಲ್ಲಿ ಯಾವುದು ಅಧಿಕ ? ಯಾವುದು ಕೀಳು ? 'ಶಿವಸ್ಯ ಹೃದಯಂ ವಿಷ್ಣುಃ । ವಿಷ್ಣೋಶ್ಚ ಹೃದಯಂ ಶಿವಃ ॥ ಯಥಾ ಶಿವಮಯೋ ವಿಷ್ಣುಃ | ಏವಂ ವಿಷ್ಣುಮಯಃ ಶಿವಃ' ಎಂದು ಶ್ರುತಿಸ್ಮೃತಿಗಳು ಒದರುವುದನ್ನು ಒಬ್ಬರೂ ಕೇಳುವುದೇ ಇಲ್ಲ. ವೃಥಾ ಅಂಧಶ್ರದ್ಧೆಗೊಳಗಾಗಿ ಶಿವನೇ ಹೆಚ್ಚು ವಿಷ್ಣುವೇ ಹೆಚ್ಚು ಎಂದು ಭೇದ ಬುದ್ಧಿಯನ್ನು ಮಾಡಿ ನರಕಮಾರ್ಗವನ್ನು ಹಿಡಿಯುವರು.

ಸತ್ಯ :—ಇಷ್ಟೆಲ್ಲಾ ಬುದ್ಧಿವಂತಿಕೆಯನ್ನು ಯಾವಾಗ ಕಲಿತುಕೊಂಡೆಯೋ ? ಕೃಷ್ಣ, ನನ್ನ ಕಣ್ಣೆದುರಿಗೆ ಹುಟ್ಟಿದ ಹುಡುಗ. ಎಷ್ಟು ವೇದಾಂತವನ್ನು ಹೇಳುತ್ತೀಯಲ್ಲಯ್ಯಾ. ನಿನ್ನ ಮಾತನ್ನು ಒಪ್ಪಿದೆ. ನೀನು ಹೇಳುವಂತೆ ಹರಿಹರರಿಬ್ಬರೂ ಸಮ.

ಕೃಷ್ಣ :—ಇರಲಿ, ಆಚಾರ್ಯ ಸ್ವಾಮಿಗಳೇ ಈ ಊರಿನ ಮಾರ್ಗದ ಮನೆ ಮಾರಯ್ಯನು ಗ್ರಾಮವನ್ನು ಬಿಟ್ಟು ಹೊರಟುಹೋದನಂತೆ. ಏನು ಕಾರಣ ನಿಮಗೇನಾದರೂ ಗೊತ್ತೆ ?

ಸತ್ಯ :— ಅವರಿವರು ಮಾತಾಡುತ್ತಿದ್ದುದನ್ನು ಕೇಳಿದೆನಪ್ಪಾ. ಅವನೇನೋ ಈಚಗೆ ಬಹು ಲೋಭಿಯಾಗಿದ್ದಾನಂತೆ. ಯಾರ್ಯಾರಿಗೂ ಏನೇನನ್ನೂ ಕೊಡುವುದಿಲ್ಲವಂತೆ. ಊರಿನಲ್ಲಿದ್ದರ ಯಾರಾದರೂ ಕೇಳುತ್ತಾರೆ ಕೊಡುವುದಕ್ಕೆ ಮನಸ್ಸಿಲ್ಲ. ಕೊಡದಿದ್ದರೆ ನಿಷ್ಠೂರ. ಇದೇಕೆ ಪೀಕಲಾಟವೆಂದು ತನ್ನ ಹೆಂಡತಿಯನ್ನೂ ಕರೆದುಕೊಂಡು ಜನಸಂಚಾರವಿಲ್ಲದ ಅಡವಿಗೆ ಹೋದನಂತೆ. ಕೃಷ್ಣ, ನೀನು ಮಾತಿಮಾತಿಗೂ ವೀರಶೈವರ ಸದ್ಗುಣಗಳನ್ನು ಹೊಗಳುತ್ತೀಯೇ, ನೋಡಿದಯೋ ? ವೀರಶೈವನಾದ ಮಾರನ ಯೋಗ್ಯತೆಯನ್ನು! ಬ್ರಾಹ್ಮಣನಾದವನು ಹೀಗೆಂದಾದರೂ ಮಾಡಿಯಾನೆ ?

ಕೃಷ್ಣ :— ಆಚಾರ್ಯರೇ, ನಿಮ್ಮ ಬ್ರಾಹ್ಮಣರ ಯೋಗ್ಯತೆ ಎಷ್ಟು ಕೊಂಡಾಡಿದರೂ ತೀರದು. ಪ್ರಕಾಶಪುರದಲ್ಲಿ ಈಗ ಎಂಟು ದಿನಗಳ ಕೆಳಗೆ ಒಬ್ಬ ಮುದುಕಿಯು ಕಾಲವಾದಳು. ಆಕೆಗೆ ವಿಧವೆಯಾದ ಒಬ್ಬಳೇ ಮಗಳು. ಪಾಪ ! ಬೇರೆ ಸಹಾಯಕರೇ ಇಲ್ಲ. ಗ್ರಾಮ ಜೋಯಿಸನಾದ ಸುಬ್ರಹ್ಮಣ್ಯ ಶಾಸ್ತ್ರಿಯನ್ನು ಶವಸಂಸ್ಕಾರಕ್ಕಾಗಿ ಕರೆದರೆ ಅಡಿಗೆ ಮನೆಯಲ್ಲಿ ಬಚ್ಚಿಟ್ಟುಕೊಂಡು ತಲೆ ಬಾಗಿಲಿಗೆ

ಬೀಗ ಹಾಕಿಸಿಕೊಂಡ. ತಮಗೆ ಬರುವ ಮಾಮೂಲಿಗಾದರೆ ಅವನೂ ಅವನ ತಾಯಿಯೂ ಇಬ್ಬರೊಂದಾಗಿ ಬೀದಿಯಲ್ಲಿ ನಿಂತು ಬಾಯಿ ಮಾಡುತ್ತಾನೆ. ಇದೇ ಅಲ್ಲವೆ ಬ್ರಾಹ್ಮಣರ ಯೋಗ್ಯತೆ ?

ಸತ್ಯ :—ಇರಲಪ್ಪಾ ಕೃಷ್ಣ, ಈಗ ಮಾರನು ಅಡವಿಗೆ ಹೋದನಲ್ಲಾ. ಅವನೆಂತಹ ಲೋಭಿಯಿರಬಹುದು ?

ಕೃಷ್ಣ :—ಆಚಾರ್ಯರೇ, ಅವನು ಕೇವಲ ಲೋಭದಿಂದಲೇ ಅಡವಿಯನ್ನು ಸೇರಿದನೆಂದು ಹೇಳುವುದಕ್ಕೆ ಬರುವುದಿಲ್ಲ. ಬೇರೆ ಏನೋ ಗೂಢವಿರಬೇಕು.

ಸತ್ಯ :—ಅಂಥಾ ಗೂಢವೇನಯ್ಯಾ ?

ಕೃಷ್ಣ :—ಯೋಚಿಸಿ ನೋಡಿರಿ, ಅವನು ಕೇವಲ ಲೋಭಿಯಾಗಿದ್ದರೆ ಗ್ರಾಮದಲ್ಲಿದ್ದು ತನ್ನ ಲೋಭವನ್ನು ಬಿಡದ ಇರಬಹುದಾಗಿತ್ತು. ಕೇಳಿದವರಿಗೆ ಇಲ್ಲವೆಂದು ಒಂದು ಸಾರಿ ಹೇಳಿದ್ದರೆ ಪುನಃ ಅವನನ್ನು ಯಾರೂ ಕೇಳುತ್ತಿರಲಿಲ್ಲ. ಆದರೆ 'ನಾಸ್ತಿ' ಶಬ್ದವು ತನ್ನ ಬಾಯಿಂದ ಬರಬಾರದೆಂಬ ಉದ್ದೇಶದಿಂದ ಅಡವಿಗೆ ಹೋಗಿದ್ದಾನೆ. ಇದರಿಂದ ನಾವು ಏನೆಂದು ತಿಳಿಯಬೇಕು ? ನಿಮಗೆ ಹೇಗೆ ತೋರುತ್ತದೆ ಹೇಳಿ.

ಸತ್ಯ :—ನನಗಂತೂ ಏನೂ ತೋಚುವದೇ ಇಲ್ಲವಯ್ಯಾ. ನಿನ್ನ ಮಾತುಗಳನ್ನು ಕೇಳಿ ಕೇಳಿ ನನ್ನ ಮನಸ್ಸಿನಲ್ಲಿ ಆಶ್ಚರ್ಯವೇ ತುಂಬಿ ಬಿಟ್ಟಿದೆ. ಯೋಚನೆಗೆ ಸ್ಥಳವೇ ಇಲ್ಲ. ನೀನೇ ಹೇಳು, ನಿನ್ನ ಮನಸ್ಸಿಗೆ ಹೇಗೆ ತೋರುತ್ತದೆ?

ಕೃಷ್ಣ :—ಬಹುಶಃ ಅವನು ಯಾವುದೋ ಒಂದು ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡು ಆ ಉದ್ದೇಶ ಸಾಧನೆಗಾಗಿ ಅಡವಿಗೆ ಹೋಗಿದ್ದಾನೆಂದು ಕಾಣುತ್ತದೆ.

ಸತ್ಯ :—ಇದ್ದರೂ ಇರಬಹುದು. ಕೃಷ್ಣ, ಅವನು ಏತಕ್ಕಾದರೂ ಅಡವಿಗೆ ಹೋಗಲಿ. ನಾವು ಊಟಕ್ಕೆ ಮನೆಗೆ ಹೋಗೋಣ. ಬಾ ಹೊತ್ತಾಯಿತು.

ಕೃಷ್ಣ :—ಆಗಬಹುದು. ನಡೆಯಿರಿ ಹೋಗೋಣ.

(ಇಬ್ಬರೂ ಹೋಗುವರು)

ಪ್ರಥಮಾಂಕವು ಮುಗಿದುದು.

## ೨ ನೆ ಅಂಕವು

(ಅಡವಿಯಲ್ಲಿಇಕ್ಕದಮಾರ ಕೊಡದಮಾರಿಯರ ಪ್ರವೇಶ)

ಮಾರ :—

ಕಂದ|| ಹರಪಾದಾಬ್ಜವೆ ಗತಿಯೆಂ |
ದುರು ನೋಂಪಿಯ ಚರಿಸಲೆಂದು ಜನಸಂದಣಿಯಂ||
ತೊರೆದೀ ನಿರ್ಜನ ವಿಪಿನದೊ |
ಳಿರುವೆಂ ವ್ರತಮಂ ಸಮಂತು ಪಾಲಿಕೆ ಶಿವ ತಾಂ ||

ಸಖೀಮಣಿ, ನಿನ್ನ ಇಚ್ಛೆಯಂತೆ ಗ್ರಾಮವಾಸವನ್ನು ಬಿಟ್ಟು ಅಡವಿಗೆ ಬಂದಿದ್ದಾಯಿತು. ಸರ್ವದಾ ಜನಗಳ ಗುಂಪಿನಲ್ಲಿಯೇ ಇದ್ದ ನಿನಗೆ ಈ ನಿರ್ಜನ ಪ್ರದೇಶವು ಮನಸ್ಸಿಗೆ ರಮ್ಯವಾಗಿರುವುದ ?

ಮಾರಿ :—ಕಾಂತ, ದುರ್ಜನರಿಂದ ನಿಬಿಡೀಕೃತವಾದ ಗ್ರಾಮಗಳಿಗಿಂತಲೂ ಈ ಅಡವಿಯೇ ಮೇಲಲ್ಲವೆ ? ಏಕೆಂದರೆ ಪಾಪಿಗಳು ಗ್ರಾಮದಿಂದ ಹೊರಡಿಸಿದ ಧರ್ಮವು ಅಡವಿಯಲ್ಲಿ ಬಂದು ಸೇರಿರುವುದು. ನಮ್ಮಂಥವರಿಗೆ ಅದೇ ಬೆಂಬಲ.

ಮಾರ :—ನಿಜ, ಪ್ರಿಯೆ, ಈ ಕಾಲದಲ್ಲಿ ಎಲ್ಲೆಲ್ಲಿಯೂ ಪಾಪವೇ ಅತಿಯಾಯಿತು. ಧರ್ಮಕ್ಕೆ ಉಳಿದಿರುವ ಒಂದು ಪಾದವೂ ಕುಂಟುವಂತೆ ಕಾಣುತ್ತದೆ. ಸತ್ಯ, ಶಾಂತಿ, ತಾಳ್ಮೆ ವಿನಯಾದಿ ಸದ್ಗುಣಗಳು ಅಪೂರ್ವವಾದವು. ಅನೃತ, ಕಾರ್ಪಣ್ಯ, ವ್ಯಭಿಚಾರಾದಿ ಮಹಾ ಪಾತಕಗಳು ಬೆಳೆದುವು. ಜನಗಳು ಪಾಪಕ್ಕೆ ಹೇಸುವುದಿಲ್ಲ ಅವರಿಗಿಂತಲೂ ಈ ವನದಲ್ಲಿರುವ ಕಾಡು ಮೃಗಗಳೇ ಮೇಲು.

ಮಾರಿ :—ಕಾಂತ, ಲೋಕದವರನ್ನು ನಿಂದಿಸಿ ನಮಗಾಗುವ ಲಾಭವೇನು ? ನಾವು ಸರಿಯಾಗಿದ್ದರಾಯಿತು. ಬಾ ಇಲ್ಲಿಲ್ಲಿ ತಿರುಗಿ ಈಗತಾನೇ ಪೈರಿಟ್ಟಿರುವ ನಮ್ಮ ಕ್ಷೇತ್ರವನ್ನು ನೋಡಿಕೊಂಡು ಬರೋಣ.

ಮಾರ:-ಆಗಬಹುದು. (ಮುಂದೆಬಂದು) ಪ್ರಿಯೆ, ಈ ವಸಂತ ಋತುವಿನಲ್ಲಿ ಈ ವನ್ಯ ವೃಕ್ಷಲತೆಗಳು ಎಷ್ಟು ಕೋಮಲವಾಗಿ ಬೆಳೆದಿರುವುವು. ಈ ಬನದ ಸೊಬಗನ್ನು ನೋಡು.

ವೃತ್ತ|| ಮಧುಪಂಗಳ್ ಶ್ರುತಿಯಿಕ್ಕೆ ಪಕ್ಷಿನಿವಹಂ ಸಂಗೀತಮಂ ಪಾಡೆ ಮಾ | ಗಿದ ಪಣ್ಗಳ್ ಬಗುಳ್ದಾ ಮೃದಂಗ ರವಮಂ ನೀಡಲ್ ಕರಂಮೆಚ್ಚಿ ಸ | ಮ್ಮದದಿಂ ಭೂರುಹವೃಂದವಾತ್ಮಶಿರಮಂ ತೂಂಗಲ್ ಮೃಗಂಗಳ್ ವಲಂ| ಪದೆ ದಾರಣ್ಯಕ ಕೇಳಿಯಾಡೆ ನಗುವಂ ನೋಡೀ ವಸಂತಾಧಿಪಂ ||

ಈ ಪಕ್ಷಿಗಣದ ಕಲಗಾನವನ್ನು ಕೇಳಿದೆಯಾ ?

ಕಂದ|| ಶುಕಪಿಕ ಕೋಕಿಲ ರುತವದು । ಸಖಿ, ಮನ್ಮಥ ರತಿಯ ಸಂಗಮೋತ್ಸವ ಶುಭಗೀ || ತಿಕೆಗಳ ಸಂಭ್ರಮದಿಂ ಮೆ|ಚ್ಚಿಕೆಯಾಗುವತೆರದಿ ಪಾಡುವಂತಿರೆ ತೋರ್ಕುಂ||

ಇಗೋ ಇದೇ ನಮ್ಮ ಕ್ಷೇತ್ರ. ಇದು ನಿನ್ನ ಮುಂದ ಹಾಸದಂತೆ ಪ್ರಫುಲ್ಲವಾಗಿರುವುದು.

ಮಾರಿ.—ರಮಣ, ಈಗತಾನೇ ಹೊರಹೊಮ್ಮಿ ನೆಟ್ಟನೆ ನಿಂತಿರುವ ಈ ಬತ್ತದ ತೆನೆಯು ಯೌವನ ಸಾಮ್ರಾಜ್ಯದಲ್ಲಿ ಪ್ರಥಮತಃ ಪದಾರ್ಪಣ ಮಾಡಿ ಪ್ರಪಂಚವನ್ನರಿಯದ ಶಠ ಸ್ವಭಾವದ ಮುಗ್ಧಾಂಗನೆಯಂತೆ ಕಾಣುವುದು.

ಮಾರ:—ನಿಜ, ಲಜ್ಜಾವನತಮುಖಿಯಾದ ಕೋಮಲೆಯಾದ ಪ್ರೌಢೆಯಂತೆ ಈ ಬಲಿತು ಬಾಗಿದ ತೆನೆಯು ಕಂಗೊಳಿಸುವುದು.

ಮಾರಿ:—ನಾಥ, ನಮಗೆ ನಾವಿರುವ ಈ ಪ್ರದೇಶವೇ ಸ್ವರ್ಗ. ಇದರ ಸುತ್ತಲು ಕಟ್ಟಿರುವ ಗ್ಯಾರೆ ಮುಳ್ಳಿನ ಬೇಲಿಯೇ ಏಳು ಸುತ್ತಿನ ಕೋಟೆ. ಅಲ್ಲಲ್ಲಿರುವ ಮರಗಳೇ ಕಲ್ಪವೃಕ್ಷಗಳು. ನಮ್ಮ ಹಸುಗಳೇ ಕಾಮಧೇನುಗಳು. ಹರಿಣಗಣವೇ ದೇವತೆಗಳು.

ಮಾರ.—ನಿಶ್ಚಯ. ಈ ದೇವಲೋಕಕ್ಕೆಲ್ಲಾ ನಾನೇ ದೇವೇಂದ್ರ. ನೀನೇ ದೇವೇಂದ್ರನ ಪಟ್ಟದ ರಾಣಿಯಾದ ಶಚಿ.

ಮಾರಿ:—ಕಾಂತ, ನೀನು ದೇವೇಂದ್ರನಾದರೆ ಆಗು. ನನಗೇನೋ ಶಚಿಯಾಗಲಿಷ್ಟವಿಲ್ಲ.

ಮಾರ,—ಅದೇಕೆ ಶಚೀದೇವಿ. ನಿನಗಾಗುವ ತೊಂದರೆ ಏನು?

ಮಾರಿ.—ತೊಂದರೆಯೇ? ಹೇಡಿಯಾದ ದೇವೇಂದ್ರನು ಹೆಂಡತಿಯನ್ನು ಕಾಪಾಡಲಾರನಾದಕಾರಣ ಅವಳಿಗೆ ಪ್ರತಿಕ್ಷಣದಲ್ಲಿಯೂ ರಾಕ್ಷಸ ಬಾಧೆಯ ಭಯವಿದ್ದೇ ಇರುವುದು.

ಮಾರ:—ಇಲ್ಲ, ಈ ನನ್ನ ಗ್ಯಾರೆ ಬೇಲಿಯ ಕೋಟೆಯಲ್ಲಿ ಯಾವ ರಾಕ್ಷಸರು ಪ್ರವೇಶಿಸಬೇಕು ?

ಮಾರಿ:—ಕಾಡು ಮೃಗಗಳು ಅಥವಾ ಭಿಕ್ಷುಕರು.

ಮಾರ.—ಛೆ-ಛೆ-ಎಲ್ಲಿಯ ಮಾತು. ಇರುವೆಯೂ ಸಹ ನುಸಿಯಲಾರದಷ್ಟು ಭದ್ರವಾಗಿರುವ ಬೇಲಿಯನ್ನು ದಾಟಿ ಕಾಡುಮೃಗಗಳಾಗಲಿ ಭಿಕ್ಷುಕರಾಗಲಿ ಬಂದು ನಿನ್ನನ್ನು ತೊಂದರೆಪಡಿಸುವುದೆಂದರೇನು? ಈ ನಮ್ಮ ಬೇಲಿಯು ಸುತ್ತಲೂ ಆರು ಮೈಲುಗಳವರೆಗೂ ಇದೆ. ಇಷ್ಟು ವಿಸ್ತೀರ್ಣದೊಳಗಾಗಿ ಯಾವ ಭಯವೂ ಇಲ್ಲ. ಈ ಪ್ರದೇಶದಲ್ಲಿ ನಮ್ಮ ವ್ರತವು ನಿರುಪಾಧಿಕವಾಗಿ ಜರುಗುವುದು.

ಮಾರಿ.—ಹಾಗಾದರೆ ಸರಿ. ನಿನ್ನೆಯದಿನ ನಾವು ಇಲ್ಲಿಗೆ ಬಂದಿದ್ದಾಗ ಆ ಭಾಗದ ಹರಳು ಗಿಡಕ್ಕೆ ಕೊಂಡ್ಲಹುಳ ಬಿದ್ದಿದ್ದುವು. ಈ ದಿನ ಹೆಚ್ಚಿನೆಯೋ ಅಥವಾ ಕಡಿಮೆಯಾಗಿದೆಯೋ ತಿಳಿಯದು.

ಮಾರ:—ನಾನು ಹೋಗಿ ನೋಡಿಕೊಂಡು ಬರುತ್ತೇನೆ. ಪ್ರಿಯೆ, ನೀನು ಮನೆಗೆ ಹೋಗಿ ಪಾಕವನ್ನು ಸಿದ್ಧಗೊಳಿಸು.

ಮಾರಿ:—ಹಾಗೆಯೇ ಆಗಲಿ. (ಹೊರಟುಹೋಗುವಳು)

ಮಾರ:—(ಮುಂದೆ ನಡೆದು) ಇದು ನವಣೆಯ ಹೊಲ. ರೋಗಾದ್ಯುಪದ್ರವಗಳಿಲ್ಲದೆ ಚೆನ್ನಾಗಿದೆ. ಬಿಗಿಯಾದ ಕಾವಲು ಮಾತ್ರ ಬೇಕು. (ಬೇರೆಕಡೆ ತಿರುಗಿ) ಇದೇ ಹರಳು ಹೊಲ. ಇಲ್ಲಿಯೇ ಕೊಂಡ್ಲ ಹುಳುಗಳಿರುವುದು. ನಿನ್ನೆಗಿಂತಲೂ ಈ ದಿನ ಹೆಚ್ಚಾಗಿವೆ. ಏನು ಮಾಡಲಿ ? ಊರಿನಲ್ಲಾದರೆ ಯಾರಾದರೂ ಏನಾದರೂ ಸಲಹೆಯನ್ನು ಕೊಡುತ್ತಿದ್ದರು. ಈ ಗೊಂಡಾರಣ್ಯದಲ್ಲಿ ಯಾರನ್ನು ಕೇಳಲಿ ? ಇಟ್ಟ ಪೈರು ಹಾಳಾಗಿ ಹೋಗುವುದಲ್ಲಾ. ಇವುಗಳನ್ನು ಆಯ್ದಾದರೂ ಬಿಸಾಡುವೆನು. (ಆಯುತ್ತಾ ಇರುವನು)

ಈಶ್ವರ:—(ಪ್ರವೇಶಿಸಿ) ನಾರದನ ಮಾತಿನಿಂದ ಉತ್ತೇಜಿತನಾದ ನಾನು ಜಂಗಮವೇಷಧಾರಿಯಾಗಿ ಇಕ್ಕದದಮಾರನಿಂದ ಭಿಕ್ಷವನ್ನು ಹೊಂದಲು ಬಂದೆನು. ಅವನ ಬಳಿಗೆ ಹೋಗುವೆನು (ಮುಂದೆ ಬಂದು) ಇದೇ ಅಡವಿಯಲ್ಲಿಯೇ ಅವನಿದ್ದಾನಂತೆ. (ನೋಡಿ) ಇದೇನು ! ಗ್ಯಾರೇ ಮುಳ್ಳಿನ ಬೇಲಿ. ಇದರಲ್ಲಿ ತಿರ್ಯಗ್ಜಂತುಗಳೂ ಸಹ ಪ್ರವೇಶಿಸಲಾರವು. ಈ ಬೇಲಿಯೇ ಅವನ ವ್ರತದ ಗುರುತಾಗಿ ತೋರುತ್ತದೆ. ಇರಲಿ, ಒಳಗೆ ಪ್ರವೇಶಿಸುತ್ತೇನೆ (ಒಳಹೊಕ್ಕು) ಇಗೋ-ಇವನೇ ಮಾರಭಕ್ತ. ಹುಳುಗಳನ್ನು ಆಯುತ್ತಿದ್ದಾನೆ. ಇವನು ನನ್ನ ಕಡೆಗೆ ತಿರುಗುವಂತೆ ನನ್ನಷ್ಟಕ್ಕೆ ನಾನೇ ಏನಾದರೂ ಹೇಳಿಕೊಳ್ಳುವೆನು. ನನ್ನನ್ನು ನೋಡಿದ ಬಳಿಕ ಮಾತನಾಡಿಸುತ್ತೇನೆ.

ಕಂದ|| ಎಲೆ ಮಾನವ ಸಂಸಾರದ |
ಜಲಭೋಗವ ತೊರೆದು ಪರಮಪುರುಷನ ಪದಮಂ ||
ಸಲೆ ಭಜಿಸು ದಾನಧರ್ಮವ |
ನೊಲವಿಂದಾಚರಿಸಿ ಮೋಕ್ಷ ಸೌಖ್ಯವ ಪಡೆ ನೀಂ ||

ಮಾರ.—(ತಿರುಗಿ ನೋಡಿ) ಸರಿ. ಯಾರೋ ಜಂಗಮರು ಬಂದಂತೆ ಕಾಣುತ್ತದೆ. "ರಾಮೇಶ್ವರಕ್ಕೆ ಹೋದರೂ ಶನೇಶ್ವರ ಬಿಡದು"ಎಂಬಂತೆ ಊರನ್ನು ಬಿಟ್ಟು ಅಡವಿಗೆ ಬಂದಾಗ್ಯೂ, ಭಿಕ್ಷುಕರ ಕಾಟ ತಪ್ಪಲಿಲ್ಲವಲ್ಲಾ. ಈತನು ಭಿಕ್ಷವನ್ನು ಕೇಳಿದರೆ ಏನೆಂದುತ್ತರಕೊಡಲಿ? ಇಲ್ಲವೆಂದು ಹೇಳಲು ಬಾಯಿಬಾರದು. ಕೊಡುವುದಕ್ಕೆ ವ್ರತದ ನಿರ್ಬಂಧ. ಆಗಲಿ, ಏನಾದರೊಂದುಪಾಯದಿಂದ ಈತ

ನನ್ನು ಕಳೆಸಿಕೊಡುತ್ತೇನೆ. (ಸಮೀಪಕ್ಕೆ ಬಂದು) ಗುರುವೇ, ವಂದಿಸುತ್ತೇನೆ.

ಈಶ್ವರ :— ಕಲ್ಯಾಣಮಸ್ತು. ಅಯ್ಯಾ ಭಕ್ತಶಿರೋಮಣಿ. ನಿನ್ನ ಹೆಸರೇನು ?

ಮಾರ :— ದೇವ, ನನಗೆ ಇಕ್ಕಡದಮಾರನೆಂದು ಹೆಸರು.

ಈಶ್ವರ:— ಸರಿ. ನಿನಗೆ ಸಹಧರ್ಮಿಣಿ ಇರುವಳೋ? ಆಕೆಯ ಹೆಸರೇನು ?

ಮಾರ :— ಆಕೆಯ ಹೆಸರು ಕೊಡದಮಾರಿಯೆಂದು. ಸ್ವಾಮಿ ತಾವು ಯಾರು ? ತಮ್ಮ ವಾಸಸ್ಥಾನವಾವುದು? ಏತಕ್ಕೋಸ್ಕರ ಇಲ್ಲಿಗೆ ದಯಮಾಡಿಸೋಣವಾಯಿತು ? ತಮ್ಮ ನಾಮಧೇಯವೇನು ?

ಈಶ್ವರ :— ಹೇಳುತ್ತೇನೆ, ಕೇಳು .-

ಕಂದ|| ಗಿರಿಗುಹೆಯೊಳೆನಗೆ ವಾಸವು |
ತರುಣಿಯರಿರ್ವರುಗಳಿಹರು ಮೂವರು ಸುತರ್ಗ್ಗೆ ||
ಚರಿಸುವೆ ಭಿಕ್ಷೆಗೆ ಲೋಕದಿ |
ಕರೆವರು ಗಂಗಾಧರಯ್ಯನೆಂದೆನುತೆನ್ನಂ ||

ಪತ್ನೀ ಪುತ್ರರ ಕಾಟವನ್ನು ಸೈರಿಸಲಾರದೆ ನಿನ್ನಂಥಾ ದಾನಶೂರರಾದ ಭಕ್ತರಿಂದ ಭಿಕ್ಷವನ್ನು ಯಾಚಿಸೋಣವೆಂದು ಬಂದೆನು ಏನಾದರೂ ಕೊಟ್ಟರೆ ಆಶೀರ್ವಾದ ಮಾಡಿ ಹೋಗುವೆನು.

ಮಾರ.— ಪ್ರಭುವೇ, ತಮ್ಮನ್ನು ನೋಡಿ ಸಾಕ್ಷಾತ್ ಕೈಲಾಸದೊಡೆಯನ ದರ್ಶನಮಾಡಿದಂತಾಯಿತು. ತಮ್ಮಂಥಾ ಮಹನೀಯರಿಗೆ ಮಾಡಿದ ದಾನವು ಒಂದಕ್ಕೆ ನೂರಾಗುವುದು. ಆದರೆ ತಾವು ಅಕಾಲದಲ್ಲಿ ಬರೋಣವಾಯಿತು. ನಾನು ಈಗತಾನೇ ಪೈರಿಟ್ಟಿದ್ದೇನೆ. ಅದು ಸಮೃದ್ಧಿಯಾಗಿ ಬೆಳೆದು ಧಾನ್ಯವು ಮನೆಗೆ ಬರಲಿ. ಅನಂತರ ತಮ್ಮ ಮರ್ಯಾದೆಗೂ ನನ್ನ ಯೋಗ್ಯತೆಗೂ ತಕ್ಕಂತೆ ಏನಾದರೂ ಕೊಡುವೆನು.

ಈಶ್ವರ.— ಏನುಕೊಡುವೆಯೆಂಬುದನ್ನು ಮೊದಲೇ ತಿಳಿಸಿದ್ದರೆ ಚೆನ್ನಾಗಿತ್ತು. ನಿನ್ನಂಥಾ ದಾನಶೂರನಾದ ಭಕ್ತನು ಯಥೇಚ್ಛೆಯಾಗಿಯೇ ನಮಗೆ ಭಿಕ್ಷವನ್ನು ಕೊಡುತ್ತೀಯೆಂದು ನಂಬುಗೆ ಇದೆ. ಆದ್ದರಿಂದ ನಿನ್ನಿಂದ ಬರುವುದೆಷ್ಟೆಂದು ಮೊದಲೇ ನಮಗೆ ತಿಳಿದರೆ, ನಿನ್ನ ಫಲವು ಬರುವವರೆಗೂ ಬೇರೆಯವರಲ್ಲಿ ಸಾಲವನ್ನಾದರೂ ತಂದು ಕಾಲವನ್ನು ತಳ್ಳುತ್ತಿರಬಹುದು.

ಮಾರ :— ಸ್ವಾಮಿ, ನನಗೆ ಈ ಸಾರಿ ಉತ್ಕೃಷ್ಟವಾದ ಬೆಳೆಯಾದರೆ ನಿಮಗೆ ಖಂಡಿತವಾಗಿ ಒಂದು ಸೇರು ನವಣೆಯನ್ನು ಕೊಡುತ್ತೇನೆ.

ಈಶ್ವರ :— ಏನಯ್ಯಾ , ಮಾರಭಕ್ತ. ಒಂದು ಸೇರು ನವಣೆಯು ನನ್ನ ಕುಟುಂಬಕ್ಕೆ ಒಂದು ಹೊತ್ತಿಗೂ ಸಾಲದಲ್ಲ? ನಿನ್ನಂಥ ಧನಧಾನ್ಯಯುಕ್ತನಾದ ಶ್ರೀಮಂತನನ್ನು ಯಾಚಿಸಿದರೂ ಇಷ್ಟೇನೆ? ಗುಡ್ಡವನ್ನು ತೋಡಿ ಇಲಿಯನ್ನು ಹಿಡಿದಂತಾಯಿತಲ್ಲಾ.

ಮಾರ :— ಗುರುವೇ. ಲೋಕದಲ್ಲಿ ಎಷ್ಟೋ ಲಕ್ಷ ಭಿಕ್ಷುಕರಿದ್ದಾರೆ. ಎಲ್ಲರಿಗೂ ಒಬ್ಬನುಕೊಟ್ಟು ತಣಿಸಲಾದೀತೇ? ಈಸಾರಿಗೆ ಅಷ್ಟರಲ್ಲಿಯೇ ಸಮಾಧಾನಪಡೋಣವಾಗಲಿ. ಈಭಿಕ್ಷವು ತಮಗೆ ಸಂದನಂತರ ಯೋಚಿಸೋಣ.

ಈಶ್ವರ :— ಹಾಗೆಯೇ ಆಗಲಿ. ಹೋಗಿಬರುತ್ತೇನೆ.

ಮಾರ :— ಪ್ರಭು. ಅನಾಯಾಸವಾಗಿ ಮಹಾತ್ಮರು ಬಡವನ ಮನೆ ಬಾಗಿಲವರೆಗೂ ಬಂದಿದ್ದೀರಿ. ಇಂಥಾ ಸುಯೋಗವು ದೊರೆಯುವುದೇ ಅಪೂರ್ವ. ಆದ್ದರಿಂದ ದೀನನಾದ ನಾನೊಂದು ವಿಜ್ಞಾಪನೆಯನ್ನು ಮಾಡಿಕೊಳ್ಳುತ್ತೇನೆ. ಏನೆಂದರ ಈ ನನ್ನ ಪೈರಿಗೆ ಯಾವುದೊಂದು ರೋಗವೂ ತಗಲಬಾರದು. ಕಳ್ಳರು ಕದಿಯಬಾರದು. ಕಾಡು ಮೃಗಗಳು ಪ್ರವೇಶಿಸ ಬಾರದು. ಕಾಲ ಕಾಲಕ್ಕೆ ಸರಿಯಾಗಿ ಮಳೆಯಾಗಬೇಕು. ಅತಿವೃಷ್ಟಿಯಾಗ ಬಾರದು. ಅನಾವೃಷ್ಟಿಯೂ ಆಗಬಾರದು. ಬಟನ್ವಮೇಲೆ ಪೂರ್ಣಫಲವು ಕೈಸೇರಬೇಕು. ಈ ರೀತಿ ತಾವು ಅನುಗ್ರಹಿಸುವುದಾದರೆ ನಾನು ನನ್ನ ಮಾತನ್ನು ಮೀರುವುದಿಲ್ಲ.

ಈಶ್ವರ — ತಥಾಸ್ತು. ಭಕ್ತ ಶಿರೋಮಣಿ, ನಿನ್ನಿಷ್ಟದಂತೆಯೇ ಆಗಲಿ. ಹೋಗಿಬರುತ್ತೇನೆ

ಮಾರ .— ಜೀಯಾ ಸಾಷ್ಟಾಂಗ ಮಾಡುತ್ತೇನೆ, ದಯಮಾಡಿಸೋಣವಾಗಲಿ.

ಈಶ್ವರ :— ಶುಭಮಸ್ತು. (ಹೊರಟುಹೋಗುವನು)

ಮಾರ :— ಬೀಸುವ ದೊಣ್ಣೆ ತಪ್ಪಿದರೆ ಸಾವಿರ ವರುಷ ಆಯುಸ್ಸು. ಈಗ ಬಂದವನೇನೋ ಹೊರಟುಹೋದ. ಮುಂದ ಫಲ ಬಂದಾಗ್ಗೆ ಬರುವುದಾಗಿ ಹೇಳಿದ್ದಾನೆ. ಇನ್ನು ನಾಲ್ಕು ತಿಂಗಳಿದ್ದನೆ, ನೋಡೋಣ. ಆಗಲೂ ಏನಾದರೂ ಒಂದು ಉಪಾಯದಿಂದ ಕಳಿಸಿಕೊಟ್ಟರಾಯಿತು. ಪ್ರಕೃತದಲ್ಲಿ ಈ ಜಂಗಮಯ್ಯನವರು ಬಂದದ್ದರಿಂದ ನನಗೆ ಹೊಲದ ಯೋಚನೆಯು ಸಂಪೂರ್ಣವಾಗಿ ತಪ್ಪಿದಂತಾಯಿತು. ಬಹು ಅನುಕೂಲವಾಯಿತು, ಆಗಲು ಶಂಕರನ ಕೃಪೆ ಹೇಗಿದೆಯೋ ನೋಡೋಣ. (ನೇಪ

ನೋಡಿ) ಭೋಜನದ ಹೊತ್ತು ಮೀರಿ ಹೋಗಿರುವುದು. ಮನೆಯಲ್ಲಿ ಪ್ರಿಯೆಯು ಕಾದುಕೊಂಡಿರಬಹುದು. ಬೇಗ ಹೋಗೋಣ. (ಹೋಗುವನು)

ಈಶ್ವರ :—(ಪ್ರವೇಶಿಸಿ) ಮಾರಭಕ್ತನನ್ನೇನೋ ಕಂಡದ್ದಾಯಿತು. ಅವನ ಗ್ಯಾರೆ ಮುಳ್ಳಿನ ಬೇಲಿ, ಸೇರು ನವಣೆಯ ವಾಗ್ದಾನ. ಪೈರಿನ ಬೆಳೆಗಿರುವ ವಿಘ್ನಗಳ ಪರಿಹಾರ ವಿಷಯಕವಾದ ವಿಲಕ್ಷಣ ಪ್ರಾರ್ಥನೆ ಇವುಗಳನ್ನೆಲ್ಲಾ ನೋಡಿದರೆ ನಾರದನ ವಾಕ್ಯವು ಸತ್ಯವೆಂದು ಭಾಸವಾಗುತ್ತದೆ. ಇವನ ಹೆಂಡತಿ ಇನ್ನೆಂಥಾ ಮಹನೀಯಳೋ. ಆಕೆಯ ದರ್ಶನವನ್ನೂ ಮಾಡಿ ನೋಡೋಣ. (ಹೋಗುವನು)

## ೨ ನೆ ಪ್ರವೇಶ

(ಮನೆಯಲ್ಲಿ ಕೊಡದ ಮಾರಿಯು ಕುಳಿತುಕೊಂಡಿರುವಳು)

ಮಾರಿ :—ಪಾಕವು ಸಿದ್ಧವಾಗಿ ಬಹಳ ಹೊತ್ತಾಯಿತು. **ನಾಥನು** ಇನ್ನೂ ಬರಲಿಲ್ಲ. **ಅವರು** ಬರುವವರೆಗೂ ನಾನು ಮಾಡುವ ಕೆಲಸವೇನು! ಪರಶಿವನ ಪ್ರಾರ್ಥನೆಯನ್ನಾದರೂ ಮಾಡುವೆನು. ಶಂಭೊ, ಶಂಕರ, ಮಹಾದೇವ!

ವೃತ್ತ|| ಪಾಹಿ ಗಿರೀಶ ಸುರೇಶ ಸುರಾರ್ಚಿತ ಪಾವನ ಪಾಪವಿನಾಶವಿಭೊ | ಯಾಹಿ ಮಹಾಮಹಿಮಾಚ್ಯುತ ಶಂಕರ ಶೈಲಸುತಾಲಿಂಗಿತ ತನು ಭೋ | ಈ ಹಿತದಾತ ದಯಾರ್ಣವ ವಿಶ್ವವಿ | ಮೋಹನ ವಿಶ್ವಂಭರ ಶಿವಭೋ | ದೇಹಿ ತವಾಂಘ್ರಿ ಸರೋರುಹ ಯುಗ್ಮರತಿಂ ಪರಮಾತ್ಮ ಪರೇಶ್ವರ ಭೋ ||

ಕೈಲಾಸವಾಸ, ಕರುಣಾನಿಧೇ ಭವಸಾಗರದಿಂದ ರಕ್ಷಿಸು.

ಈಶ್ವರ :—(ಎದುರಿಗೆ ಬಂದು) ತಾಯೀ ಭಿಕ್ಷೆಯನ್ನು ನೀಡಮ್ಮಾ.

ಮಾರಿ :—(ನೋಡಿ ಆಶ್ಚರ್ಯದಿಂದ) ಇವನಾರು? ಅಪಾರವಾದ ಸಮುದ್ರವನ್ನು ದಾಟಿ ಲಂಕೆಯನ್ನು ಹೊಕ್ಕ ಹನುಮಂತನಂತೆ ಅಲಂಘ್ಯವಾದ ನಮ್ಮ ಗ್ಯಾರೆಮುಳ್ಳಿನ ಬೇಲಿಯನ್ನು ದಾಟಿ ಇಲ್ಲಿಯವರೆಗೂ ಬಂದಿದ್ದಾನೆ. ಈತನ ತೇಜೋಮಯವಾದ ಮುಖವನ್ನು ನೋಡಿದರೆ ಮಹಾಪುರುಷನಂತೆ ಕಾಣುತ್ತಿರುವನು. ಇಂಥಾ ಮಹನೀಯನಿಗೆ ಭಿಕ್ಷೆಯನ್ನು ಇಲ್ಲವೆಂದು ಹೇಗೆ ಹೇಳಲಿ? ಅಥವಾ ಹೇಗೆ ಹಾಕಲಿ? ಹಾಳಾದ ವ್ರತವೊಂದಿದೆಯಲ್ಲಾ. ಇಂಥಾ ಪುಣ್ಯಾತ್ಮರಿಗೆ ದಾನಮಾಡಿದರೆ ನಮ್ಮ ಕುಲಕೋಟಿಯೇ ಉದ್ಧಾರವಾಗುವುದರಲ್ಲಿ ಸಂಶಯವಿಲ್ಲ. ಆದ್ದರಿಂದಲೇ ಈ ವ್ರತವೇ ಬೇಡವೆಂದು ಯಜಮಾನರಿಗೆ ನಾನು ಮೊದಲೇ ಹೇಳಿದೆ. ಆದರೆ ನನ್ನ ಮಾತನ್ನು ಕೇಳದೆ ಹೋದರು. ಈಗೇನು ಮಾಡಲಿ? ಭಿಕ್ಷವನ್ನು ಹಾಕಲೇ, ವ್ರತ ಭಂಗವಾಗುವುದು. ಹಾಕದೇ ಇರಲೇ ಮಹತ್ತರವಾದ ಪಾಪವೊದಗುವುದು. ಉಭಯ ಸಂಕಟವೊದಗಿತಲ್ಲಾ.

ಈಶ್ವರ :—ತಾಯೀ ಇದೇನು. ಹೀಗೆ ಮೌನವಾಗಿರುವೆ ನಿನ್ನ ಕೈಮುಟ್ಟಿ ಜಂಗಮಯ್ಯನಿಗೆ ಭಿಕ್ಷೆಯನ್ನು ನೀಡಮ್ಮಾ.

ಮಾರಿ :—(ಸ್ವಗತ) ಅಯ್ಯೋ ಶಿವಶಿವ, ಯಾರಿಗೂ ಭಿಕ್ಷೆಯನ್ನು ಹಾಕಕೂಡದೆಂದು ಆಜ್ಞೆ ಮಾಡಿರಲು ನಾನು ಹೇಗೆ ಹಾಕಲಿ? ಪತಿವ್ರತೆಯರಿಗೆ ಪತಿಯ ಅಪ್ಪಣೆಯನ್ನು ಪಾಲಿಸುವುದಕ್ಕಿಂತಲೂ ಹೆಚ್ಚಾದ ಧರ್ಮವು ಬೇರೆ ಯಾವುದಿರುವುದು? ಧರ್ಮವಾಗಲಿ ಅಧರ್ಮವಾಗಲಿ ಪತಿಯಾಜ್ಞೆಯೇ ಪ್ರಮಾಣ. ಅದನ್ನುಲ್ಲಂಘಿಸುವ ದೋಷವು ಎಷ್ಟು ಜನ್ಮಗಳನ್ನೆತ್ತಿದರೂ ತೀರದು. ಬಂದ ಪಾಪವು ಬರಲಿ. ನಾನೇನೋ ಈ ಜಂಗಮಯ್ಯನವರಿಗೆ ಭಿಕ್ಷೆಯನ್ನು ಹಾಕುವುದಿಲ್ಲ.

ಈಶ್ವರ :—ಅಮ್ಮಾ ಪುಣ್ಯಾತ್ಮಳೇ. ನಿಂತು ನಿಂತು ಕಾಲು ಸೋತವು. ದಯಮಾಡಿ ಹಿಡಿ ಕಾಳು ಹಾಕಿದರ ಮುಂದಕ್ಕಾದರೂ ಹೋಗುತ್ತೇನೆ.

ಮಾರಿ :—ಗುರುವೇ ನಾನೊಂದು ವಿಜ್ಞಾಪನೆ ಮಾಡಿಕೊಳ್ಳುತ್ತೇನೆ. ಕೋಪ ಮಾಡಿಕೊಳ್ಳಬಾರದು.

ಈಶ್ವರ :—ಅದೇನು ಹೇಳಮ್ಮಾ. ಭಿಕ್ಷುಕರಾದ ನಮಗೆ ಕೋಪವೇಕೆ?

ಮಾರಿ :—ನಾನು ತಮಗೆ ಭಿಕ್ಷವನ್ನು ಹಾಕುವುದಕ್ಕಾಗುವುದಿಲ್ಲ. ಯತ್ನವಿಲ್ಲ ಮುಂದಕ್ಕೆ ದಯಮಾಡಿಸಿ.

ಈಶ್ವರ :—ಅದೇಕೆ ತಾಯಿ?

ಮಾರಿ :—ನನ್ನ ಪತಿಯು ನನಗೆ ಆಜ್ಞಾಪಿಸಿದ್ದಾರೆ.

ಈಶ್ವರ :—ಏನೆಂದು ಆಜ್ಞಾಪಿಸಿದ್ದಾನೆ.

ಮಾರಿ :—ಯಾರಾರಿಗೂ ಭಿಕ್ಷವನ್ನಾಗಲೀ ಭೋಜನವನ್ನಾಗಲಿ ಹಾಕಕೂಡದೆಂದು.

ಈಶ್ವರ :—ಯಾರಾರಿಗೂ ಹಾಕಕೂಡದಂತೋ?

ಮಾರಿ :—ಕೂಡದಂತೆ.

ಈಶ್ವರ :—ಸಾಕ್ಷಾತ್ ಈಶ್ವರನಿಗೂ?

ಮಾರಿ :— ಈಶ್ವರನಿಗೊಬ್ಬನಿಗೇ ಅಲ್ಲ. ತ್ರಿಮೂರ್ತಿಗಳು ಒಟ್ಟಿಗೆ ಬಂದು ಬೇಡಿದರೂ ಇಲ್ಲ.

ಈಶ್ವರ :—ಅದೇಕೆ ತಾಯಿ?

ಮಾರಿ :—ಅದೊಂದು ವ್ರತವಂತೆ.

ಈಶ್ವರ :—ಅದೆಂಥಾ ವ್ರತವಮ್ಮಾ ?

ಮಾರಿ :—ಎಂಥಾದ್ದೋ ನನಗೆ ತಿಳಿಯದು ಪತಿಯಾಜ್ಞೆಯಂತೆ ನಾನು ನಡೆಯ ತಕ್ಕವಳು.

ಈಶ್ವರ :—ಅಯ್ಯೋ ಹುಚ್ಚಮ್ಮಾ. ದಾನಮಾಡಬಾರದೆಂಬ ವ್ರತವೆಲ್ಲಿಯಾದರೂ ಉಂಟೆ ? ವಿಶೇಷವಾಗಿ ದಾನಮಾ ಡುವ ಉದ್ದೇಶದಿಂದಲೇ ವ್ರತಗಳು ಹುಟ್ಟಿವೆಯೇ ಹೊರ ತು ದಾನಮಾಡಬಾರದೆನ್ನುವುದಕ್ಕಲ್ಲ. ನಿನ್ನ ಗಂಡನೊಬ್ಬ ಅವಿವೇಕಿ. ಅವನ ಮಾತನ್ನು ನಂಬಿ ನೀನೂ ಹಾಗೆಯೇ ಆಗಬಹುದೆ ? ಮನೆಗೆ ಬಂದ ಅತಿಥಿಗಳೇ ದೇವರಲ್ಲವೇ ? ಅವರು ಸಂತೋಷಪಟ್ಟರೆ ಪರಮಾತ್ಮನೇ ತೃಪ್ತನಾಗು ವನು. ನನ್ನ ಮಾತನ್ನು ನಂಬಿ ಸುಮ್ಮನೆ ಭಿಕ್ಷವನ್ನು ಹಾಕು.

ಮಾರಿ :—ಗುರುವೇ ನೀವು ಹೇಳುವಂತೆ ಅತಿಥಿಗಳು ದೊಡ್ಡ ವರಿರಬಹುದು. ಆದರ ಸತಿಗೆ ಪತಿಯು ಪರಮಾತ್ಮನಿ ಗಿಂತಲೂ ದೊಡ್ಡವನು. ವಿವೇಕಿಗಳಾದ ಮಹನೀಯರು ಪತ್ನಿಯ ಮುಂದ ಪತಿಯನ್ನೆಂದೂ ಹೀಯಾಳಿಸಬಾರದು. ಆತನಾಜ್ಞೆಯನ್ನು ಮೀರಿ ನಾನು ತಮಗೆ ಭಿಕ್ಷವನ್ನು ಹಾಕಲಾರೆನು.

ಈಶ್ವರ :—ತಾಯಿ, ಎಲ್ಲರಂತೆಯೇ ನನ್ನನ್ನೂ ಸಾಮಾನ್ಯ ನೆಂದು ಭಾವಿಸಬೇಡ. ನಾನು ಕೇಳಿದ ವರಗಳನ್ನೂ ಕೊಡುತ್ತೇನೆ.

ಮಾರಿ :—ಎಲ್ಲರಿಗೂ ಕೇಳಿದ್ದನ್ನು ಕೊಡುವ ಸಾಮರ್ಥ್ಯವುಳ್ಳ ನೀವು ಭಿಕ್ಷುಕರಾಗಿ ಮನೆಮನೆಯ ಬಾಗಿಲುಗೂ ಅಲೆ ಯುವುದೇಕೆ ? ಗುರುಗಳೇ. ಇಂಥಾ ತಕ್ಕು ಮಾತುಗ ಳಿಂದ ನನ್ನನ್ನು ಬೆರಗುಗೊಳಿಸುವ ಪ್ರಯತ್ನ ಮಾಡಬೇಡಿ. ಸುಮ್ಮನೆ ಮುಂದಕ್ಕೆ ಹೋಗಿ.

ಈಶ್ವರ :—ನಿನಗೆ ತಿಳಿಯದಮ್ಮಾ ಹೇಳುತ್ತೇನೆ ಕೇಳು.

ಕಂದ|| ಅರಿಯದ ಮೂಢನ ನುಡಿಯಂ |
ಪರಮಾರ್ಥವಿದೆಂದು ಬಗೆದು, ಬಂದತಿಥಿಗಳಂ ||
ಪರಿಚರಿಸದೆ ಪಿಂದಿರುಗಿಸೆ |
ಹರಕೃಪೆ ಪರಗತಿಗಳಕ್ಕುಮೇ ಯೋಚಿಸುವಿಂ ||

ಮಾರಿ :—(ದುಃಖದಿಂದ) ಹಾಯ್ ಹಾಯ್. ಪತಿನಿಂದೆಯು ಕಿವಿಗೆ ಬಿದ್ದ ಈ ದಿನವೇ ದುರ್ದಿನ. (ಕೋಪದಿಂದ) ಎಲವೋ, ಜಂಗಮವೇಷಧಾರಿಯೆ.

ಕಂದ|| ಅಮರಾಧೀಶನು ನೀನಾ |
ಗುಮೆ ಯರಸನೆಯಾಗು ಸರಸಿಜೋದ್ಭವನಾಗೈ ||
ಯಮಿವರ ನಾಗೈ ಲಕ್ಷ್ಮೀ |
ರಮಣನೆ ನೀನಾಗು ಕೆಡಿಸಲಾರೆನು ವ್ರತಮಂ ||

ಪತಿವಾಕ್ಯವನ್ನುಲ್ಲಂಘಿಸುವಂತೆ ಉಪದೇಶಿಸುವ ನಿನ್ನ ಧರ್ಮ ನೀತಿಗೆ ಉರಿಹಚ್ಚಲಿ. ನಿನ್ನ ಮುಖವನ್ನು ನೋಡಲಾ ರೆನು. ಹೊರಟು ಹೋಗು.

ಈಶ್ವರ :—ಇದೇನಮ್ಮಾ, ಭಿಕ್ಷವನ್ನು ಬೇಡಿದವರ ಮೇಲೆ ಇಷ್ಟು ಕೋಪವೆ ?

ಮಾರಿ .— ಈ ಪತಿನಿಂದಕನೊಡನೆ ಇನ್ನು ಮಾತನಾಡಿ ಪ್ರಯೋಜನವಿಲ್ಲ. ಅಯ್ಯಾ ಹೋಗು ಇಲ್ಲಿ ನಿನಗೆ ಭಿಕ್ಷವು ಸಿಕ್ಕಲಾರದು. ನಡೆ ನಡೆ (ಬಾಗಿಲನ್ನು ಮುಚ್ಚಿಕೊಳ್ಳು ವಳು.)

ಈಶ್ವರ .— ನೋಡಿದ್ದಾಯಿತು. ಚೆನ್ನಾಗಿಯೇ ನೋಡಿದ್ದಾ ಯಿತು. ಈ ಮಹಾತ್ಮಳ ಪತಿಭಕ್ತಿಯೂ ದೃಢಚಿತ್ತವೂ ಅನ್ಯಾದೃಶವಾದುವು. ಇಂಥಾ ಯೋಗ್ಯಪತ್ನಿಯನ್ನು ಪಡೆದ ಮಾರಭಕ್ತನು ನಿಜವಾಗಿಯೂ ಧನ್ಯನೇ ಸರಿ. ನಾರದ ವಾಕ್ಷಾಯಿಣಿಯರೆದುರಿಗೆ ಮಾಡಿದ ಪ್ರತಿಜ್ಞೆಯು ನೆರವೇರುವುದು ಸಂಭವನೀಯವಾಗಿ ತೋರುವುದಿಲ್ಲ. ಕಡೆಗೂ ಭಕ್ತನೇ ಜಯಿಸುವನೋ ಏನೋ ? ಆಗಲಿ. ಸುಗ್ಗಿಯಲ್ಲಿ ಮನೆಗೆ ಬಾರೆಂದು ಮಾರಭಕ್ತನು ಹೇಳಿದ್ದಾನೆ. ಅಲ್ಲಿಯವರೆಗೂ ನಿರೀಕ್ಷಿಸೋಣ. (ಹೋಗುವನು)

## ೩ನೆಯ ಪ್ರವೇಶ

(ಮನೆಯಲ್ಲಿ)

ಮಾರಿ :—(ಪ್ರವೇಶಿಸಿ) ಸೀಸಪದ್ಯ :—

ಭಕ್ತವತ್ಸಲ ಸಾಂಬ ಭಯನಿವಾರಣ ಸಾಂಬ ನಿತ್ಯತೃಪ್ತನೆ ನಿಗಮ ವೇದ್ಯ ಸಾಂಬ | ದೇವಾದಿನುತ ಸಾಂಬ ಭಾವ ಭವಹರ ಸಾಂಬ ಪಾವಕಾರ್ಕಾಕ್ಷ ಪರಮೇಶ ಸಾಂಬ | ಗಂಗಾಧರನೆ ಸಾಂಬ ಮಂಗಳಾಂಗನೆ ಸಾಂಬ, ಲಿಂಗ ರೂಪನೆ ಲೋಕವಂದ್ಯ ಸಾಂಬ | ಪಾಲಿತಾಮರ ಸಾಂಬ ಕಾಲಾಂತಕನೆ ಸಾಂಬ ಬಾಲಮೌನಿ ಕುಮಾರಪಾಲ ಸಾಂಬ |

ಜಗವನೆಲ್ಲವ ಸೃಷ್ಟಿಗೆಯ್ವ ಸಾಂಬ |
ಜಗುಮಿಗೆ ಯೊಳದನು ಪಾಲಿಸುವ ಸಾಂಬ |
ವಿಗಡರೂಪದಿಲಯವ ಗೈವ ಸಾಂಬ |
ಅಗಣಿತ ಮಹಾ ಮಹಿಮನ ಪಾಹಿ ಸಾಂಬ |

ಈ ದಿನ ನನ್ನ ಮನಸ್ಸು ಇಷ್ಟೇಕೆ ಉದ್ವಿಗ್ನವಾಗಿರಬ ಹುದು. ? ಇಷ್ಟು ಹೊತ್ತಾದರೂ ಪ್ರಾಣಕಾಂತನೂ ಬರ

ಲ್ಲಿವಲ್ಲಾ. (ಮಾರನು ಪ್ರವೇಶಿಸುವನು) ನಾಥ, ಈ ದಿನ ಭೋಜನಕ್ಕೆ ಇಷ್ಟು ಸಾವಕಾಶಮಾಡಿ ಬರಲೇನು ಕಾರಣ?

ಮಾರ :—ಕಾಂತಾಮಣಿ. ಈದಿನ ನಾವು ನಮ್ಮ ಕ್ಷೇತ್ರವನ್ನು ನೋಡುವುದಕ್ಕಾಗಿ ಬೆಳಿಗ್ಯೆ ಹೋದಾಗ್ಯೆ, ಇಲ್ಲಿಯೂ ಭಿಕ್ಷುಕರು ಬರಬಹುದೆಂದು ನೀನು ಹೇಳಿದೆಯಲ್ಲವೆ? ಆ ಮಾತು ನಿಜವಾಯಿತು. ಈ ದಿನ ಯಾರೋ ಜಂಗಮಯ್ಯನವರು ನಾನು ಹೊಲದಲ್ಲಿ ಕೆಲಸಮಾಡುತ್ತಿದ್ದಾಗ್ಯೆ-ಒಂದು ಭಿಕ್ಷವನ್ನು ಯಾಚಿಸಿದರು. ಆದರಿಂದ ಸ್ವಲ್ಪ ಸಾವಕಾಶವಾಯಿತು.

ಮಾರಿ :—ಏನಾದರೂ ಕೊಟ್ಟಿರೇನು ?

ಮಾರ.—ಇಲ್ಲ. ಕೊಡುವುದಕ್ಕೆ ನನ್ನಲ್ಲೇನೂ ಇರಲಿಲ್ಲ. ಆದರೆ ಗುರುಗಳಿಗೆ ‘ನಾಸ್ತಿ’ ಎಂದು ಹೇಳಲಾರದೆ ಫಲಗಾಲಕ್ಕೆ ಒಂದರೆ ಒಂದುಸೇರು ನವಣೆಯನ್ನು ಕೊಡುವೆನೆಂದು ವಾಗ್ದಾನಮಾಡಿದೆನು. ಅದಕ್ಕೆ ಪ್ರತಿಫಲವಾಗಿ ಅವರಿಂದ ಅಮೋಘವಾದ ವರವೊಂದನ್ನು ಪಡೆದೆನು.

ಮಾರಿ.—ಅದೆಂತಹ ವರ? ಕೋರನ್ನದ ಭಿಕ್ಷಕ್ಕೆ ಬಂದವನು ಇನ್ನೆಂತಹ ಘನತವಾದ ವರವನ್ನು ಕೊಟ್ಟಿರಬಹುದು ?

ಮಾರ :—ರಮಣಿ, ಹಾಗೆನ್ನಬೇಡ. ಆತನನ್ನು ಸಾಮಾನ್ಯನೆಂದು ನೀನು ಭಾವಿಸಿದ್ದರೆ ಅದು ತಪ್ಪು. ಆತನ ತೇಜಃಪುಂಜವಾದ ಮುಖ ಮಂಡಲವೂ, ಜೋಲಾಡುತ್ತಿದ್ದ ಜಟೆಗಳೂ, ಜಗತ್ತಿನ ಕ್ಷಣಭಂಗುರತೆಯ ಬಾಹ್ಯ ಚಿಹ್ನೆಯಾದ ಪರಿಶುಭ್ರ ಭಸ್ಮಧಾರಣೆಯೂ, ವೈರಾಗ್ಯ ಲಕ್ಷಣಗಳಾದ ರುದ್ರಾಕ್ಷ ಮಾಲೆಗಳೂ ಆತನ ಆಯತವಾದ ದೇಹವೂ, ಇವೆಲ್ಲವುಗಳಿಗಿಂತಲೂ ಹೆಚ್ಚಾಗಿ ಆತನ ಉಜ್ವಲವಾದ ನೇತ್ರ ಕಮಲಗಳೂ ಆತನು ಮಹಾನುಭಾವನೆಂಬುದನ್ನು ವ್ಯಕ್ತಪಡಿಸುತ್ತಿದ್ದವು. ಆತನು ಕೊಟ್ಟಿರುವ ವರಬಲದಿಂದ ನಮ್ಮ ಕ್ಷೇತ್ರಕ್ಕೆ ಕಳ್ಳಕಾಕರಾಗಲಿ, ಕಾಡು ಮೃಗಗಳಾಗಲಿ ಪ್ರವೇಶಿಸುವಂತಿಲ್ಲ. ಅತಿವೃಷ್ಟ್ಯನಾವೃಷ್ಟಿಗಳ ಭಯವಿಲ್ಲ. ಬಿತ್ತಿದರೆ ಸಾಕು. ಪೂರ್ಣಫಲವು ನಿರಾಯಾಸವಾಗಿ ಕೈಸೇರುವುದು. ಇಂಥಾ ಮಹಾ ಮಹಿಮೆಯುಳ್ಳ ದಿವ್ಯ ಮೂರ್ತಿಯು ಎದುರಿಗೆ ನಿಂತು ಎರಡು ಕೈಗಳನ್ನೂ ಒಡ್ಡಿ ‘ದೇಹಿ’ ಎಂದು ಬೇಡಿದರೆ ‘ನಾಸ್ತಿ’ ಎಂದು ಯಾವ ನಾಲಗೆಯಿಂದ ಹೇಳಲಾದೀತು? ನನಗಂತೂ ವ್ರತದ ನಿರ್ಬಂಧವಿಲ್ಲದಿದ್ದ ಭಾಗದಲ್ಲಿ ನನ್ನ ಸರ್ವಸ್ವವನ್ನೂ ಆತನ ಪಾದಕಮಲಗಳಿಗರ್ಪಿಸಿ ಬಿಡಬೇಕೆನ್ನಿಸಿತು. ಯತ್ನವಿಲ್ಲದ್ದರಿಂದ ಸುಮ್ಮನಾಗಬೇಕಾಯಿತು. ಆದರೂ ಇಲ್ಲವೇ ಇಲ್ಲವೆಂದು ಹೇಳಿ ಆತನ ಮನಸ್ಸನ್ನು ಖಿನ್ನಗೊಳಿಸಲಾರದೆ ಒಂದು ಸೇರು ನವಣೆಯನ್ನು ಕೊಡುತ್ತೇನೆಂದು ಹೇಳಬೇಕಾಯಿತು.

ಮಾರಿ.—ಜೀವಿತೇಶ್ವರ, ಆತನೇ ಇಲ್ಲಿಗೂ ಬಂದು ನನ್ನಲ್ಲಿಯೂ ಭಿಕ್ಷವನ್ನು ಯಾಚಿಸಿದನು. ನನಗೂ ಸಹ ‘ನಾಸ್ತಿ’ ಎನ್ನುವುದು ಹೇಗೆಂದು ಮನಸ್ಸು ಸ್ವಲ್ಪಹೊತ್ತು ಚಡಪಡಿಸಿತು. ಆದರೆ ವ್ರತನಿರ್ಬಂಧಕ್ಕೆ ಸಿಕ್ಕಿದ್ದರಿಂದ ಆ ಜಂಗಮಯ್ಯನವರಿಗೆ ಇದ್ದದ್ದು ಇದ್ದಂತೆಯೇ ನಮ್ಮ ವ್ರತದ ವಿಷಯವನ್ನು ಹೇಳಿ ಭಿಕ್ಷವನ್ನು ಹಾಕಲಾಗುವುದಿಲ್ಲ, ಹೊರಟು ಹೋಗೆಂಬುದಾಗಿ ಸೌಮ್ಯ ರೀತಿಯಿಂದ ತಿಳಿಸಿದೆನು. ಆತನು ಕೇಳದೆ ಹಠಹಿಡಿದದ್ದರಿಂದ ನಾನು ಆತನನ್ನು ಚೆನ್ನಾಗಿ ತಿರಸ್ಕರಿಸಿ ಮುಖಭಂಗ ಮಾಡಬೇಕಾಯಿತು.

ಮಾರ —ಶಿವ ಶಿವಾ. ಎಂತಹ ಅನ್ಯಾಯ ಮಾಡಿದೆ. ವಿವೇಕಿಯಾದ ನೀನು, ಎಂತಹ ಪಾಪಕಾರ್ಯಕ್ಕೆ, ಹೇಗೆ ಮನಸ್ಸುಕೊಟ್ಟೆ.

ಮಾರಿ :—ಪ್ರಾಣಕಾಂತ. ನಾನು ಬಿನ್ನವಿಸುವುದನ್ನು ಲಾಲಿಸು. ನಾನು ಅಪರಾಧಿಯಾದಲ್ಲಿ ನೀನು ಹೇಳಿದ ಯಾವ ಶಿಕ್ಷೆಗಾದರೂ ಸಂತೋಷದಿಂದ ಒಪ್ಪಿಕೊಳ್ಳುವೆನು. ಆತನದೇ ತಪ್ಪಾಗಿದ್ದಲ್ಲಿ ನಾನು ನಿರ್ದೋಷಿಯಷ್ಟೆ ?

ಮಾರ :—ಆತನು ಮಾಡಿದ್ದೇನು ಹೇಳು. ಕೇಳಿದನಂತರ ಯೋಚಿಸುತ್ತೇನೆ.

ಮಾರಿ :—ಪ್ರಭುವೇ ಆತನು ನನ್ನ ಎದುರಿಗೆ.

ವೃತ್ತ॥ ಅವಂ ಜೀವರ ಜೀವನೋ ರಮಣಿಯುರ್ಗಾವಂ ಸ್ಥಿರಾ
ಧಾರನೋ । ಅವಂ ದೇವರ ದೇವನೋ ತನುಮನ
ಪ್ರಾಣಾದಿಗಳ್ಗೀಶನೋ ॥ ಅವಂ ಧರ್ಮದೊಳರ್ಥ
ಕಾಮಗಳೊಳಂ ಮೇಣ್ಮುಕ್ತಿಯೊಳ್ ಹೇತುವೋ ।
ಅವಾತಂ ಪರಮಾತ್ಮ ರೂಪನವನಂ ಮತ್ಕಾಂತನಂ
ಜರಿದನ್ನೈ ॥

ಆದ್ದರಿಂದಲೇ ನಾನು ಆತನನ್ನು ತಿರಸ್ಕರಿಸಬೇಕಾಯಿತು. ಇನ್ನುಮೇಲೆ ಆತನು ಭಿಕ್ಷಕ್ಕಾಗಿ ನನ್ನಬಳಿಗೆ ಎಂದೆಂದೂ ಬರುವಂತಿಲ್ಲ.

ಮಾರ :—ಆತನು ಮಾಡಿದ್ದೇನೋ ! ನಿನ್ನ ದೃಷ್ಟಿಯಿಂದ ಯೋಗ್ಯವಾದದ್ದಲ್ಲ. ನಿನಗೆ ಕೋಪಬಂದದ್ದೂ ಸಹಜವೇ. ಆದರೂ ವಿವೇಕಿಯಾದ ನೀನು ಸೈರಣೆಯನ್ನು ತಂದುಕೊಳ್ಳಬಹುದಾಗಿತ್ತು. ನಮ್ಮ ಕೈಯಿಂದ ಕೊಡಬಾರದೆನ್ನುವುದು ಮಾತ್ರ ನಮ್ಮ ವ್ರತವೇ ಹೊರತು ದಾನಕ್ಕಾಗಿ ಯಾಚಿಸುವವರನ್ನು ಮುಖಭಂಗಮಾಡಿ ಅವರ ಮನಸ್ಸಿಗೆ ನೋವ

ಷ್ಟವನ್ನುಂಟುಮಾಡಬೇಕೆಂದಲ್ಲವಲ್ಲ. ಕೇಳು, ಮನೋಹರಿ, ಪರಮೇಶ್ವರನು ತನ್ನ ಭಕ್ತರನ್ನು ಕಾಪಾಡಲು ಬದ್ಧ ಪ್ರತಿಜ್ಞನಾಗಿರುವನು. ಆತನು ತನ್ನ ಭಕ್ತರ ಸತ್ವವನ್ನು ಒರಗೆ ಹಚ್ಚಲು ಯಾವಕಾಲದಲ್ಲಿ, ಯಾವ ರೂಪದಿಂದ ಹೇಗೆ ಬರುತ್ತಾನೆನ್ನುವುದು ಯಾರಿಗೂ ಸುಲಭ ಸಾಧ್ಯವಾಗಿ ತಿಳಿಯುವಂತಿಲ್ಲ. ಹಾಗೆಯೇ ಸ್ವಲ್ಪ ಯೋಚಿಸಿ ನೋಡು. ಎರಡಾಳೆತ್ತರದ ಮೇಲಿರುವ ನಮ್ಮ ಗ್ಯಾರಿ ಮುಳ್ಳಿನ ಬೇಲಿಯನ್ನು ಎಲ್ಲಿಯೂ ಕೀಳದೆ ದಾಟಿಬರಲು ಮನುಷ್ಯ ಮಾತ್ರರಿಗೆ ಸಾಧ್ಯವೇ? ಎಲ್ಲಿಯಾದರೂ ಕಿತ್ತಿರಬಹುದೆಂದು ನಾನೂ ಪರೀಕ್ಷಿಸಿದೆನು. ಎಲ್ಲಿಯೂ ಕಿತ್ತಿದ ಗುರುತು ಕಂಡುಬರಲಿಲ್ಲ, ಇದರಿಂದ ಆತನು ತನ್ನ ಯೋಗಶಕ್ತಿಯಿಂದ ಒಳಗೆ ಬಂದಿರಬಹುದೆಂದು ಊಹಿಸಬಹುದಲ್ಲವೇ? ಉತ್ತಮೋತ್ತಮ ಧನವಾದ ಯೋಗಶಕ್ತಿಯನ್ನಾದರೂ ಕಳೆದುಕೊಂಡು ಬಂದು ನಮ್ಮನ್ನು ಇಷ್ಟು ನಿರ್ಬಂಧಪಡಿಸಿ ಬೇಡುವುದನ್ನು ನೋಡಿದರೆ ಕೇವಲ ಭಿಕ್ಷಕ್ಕಾಗಿಯೇ ಆತನು ಬಂದವನಾಗಿರದೆ ನಮ್ಮ ಮನೋದಾರ್ಢ್ಯವು ಎಷ್ಟರಮಟ್ಟಿನದೆಂಬುದನ್ನು ಪರೀಕ್ಷಿಸಲಿಕ್ಕಾಗಿಯೇ ಬಂದಿದ್ದನೆಂದು ತೋರುತ್ತದೆ. ಅದೂ ಇರಲಿ. ಆತನು ಯಾರೇ ಆಗಿರಲಿ ನಮಗೆ ಅತಿಥಿಯಾಗಿದ್ದನು. ಆತನನ್ನು ಪ್ರತ್ಯಕ್ಷ ದಾನದಿಂದಲ್ಲದಿದ್ದರೂ ವಾಙ್ಮಾತ್ರದಿಂದಾದರೂ ಸಂತೋಷಪಡಿಸಬಹುದಾಗಿತ್ತು. ಅಥವಾ ನಾನು ಬರುವವರೆಗೆ ಕಾದುಕೊಂಡಿರೆಂದು ಹೇಳಿದ್ದರೆ ಒಂದೇ ಮಾತಿನಲ್ಲಿ ತಂಟೆ ಮುಗಿದು ಹೋಗುತ್ತಿತ್ತು. ಹಾಗೆ ಮಾಡದೆ ಆತನನ್ನು ಅವಮಾನ ಗೊಳಿಸಿದ್ದು ನಿನ್ನ ತಪ್ಪೆಂದೇ ಹೇಳಬೇಕಾಗುತ್ತದೆ.

ನಾರಿ:—ಕಾಂತ, ಪತಿಯನ್ನು ನಿಂದಿಸುವವನನ್ನು ಉಪಚರಿಸುವುದು ನಿಜವಾದ ಪತಿಭಕ್ತೆಯರಿಗೆ ಸಾಧ್ಯವೆ? ಅದು ನನ್ನಿಂದಲಂತೂ ಆಗುವ ಮಾತಲ್ಲ.

ಮಾರ:—ಅಂಥವರನ್ನೇ ಅಲ್ಲ. ಸಖಿ, ಪ್ರಾಣಿಮಾತ್ರವನ್ನೇ ಮನೋವಾಕ್ಕಾಯ ಕರ್ಮಗಳಿಂದ ನೋಯಿಸಬಾರದು. ಪರಮೇಶ್ವರನು ಸರ್ವ ಪ್ರಾಣಿಗಳ ಹೃದಯಾಂತರಾಳದಲ್ಲಿಯೂ ವ್ಯಾಪ್ತನಾಗಿದ್ದಾನೆ. ಯಾವ ಪ್ರಾಣಿಯ ಮನಸ್ಸಿಗೆ ವ್ಯಥೆಯನ್ನುಂಟುಮಾಡಿದರೂ ನಮ್ಮ ಆರಾಧ್ಯ ದೈವವಾದ ಸಾಂಬಮೂರ್ತಿಗೇ ಆದಂತಾಗುವುದು. ಈಗಾದದ್ದು ಆಗಿಹೋಯಿತು. ಈ ದಿನ ಬಂದ ಜಂಗಮಯ್ಯನವರು ಫಲಗಾಲಕ್ಕೆ ಪುನಃ ಬರುವರು. ನಮ್ಮ ಸತ್ವಪರೀಕ್ಷೆ ಮಾಡುವುದೇ ಅವರ ಮುಖ್ಯೋದ್ದೇಶವಾಗಿ ತೋರುವುದರಿಂದ ಬರದೆ ಇರುವುದಿಲ್ಲ. ಹಾಗೆ ಬಂದಾಗ್ಯೂ ಮುಂದಾದರೂ ಒಳ್ಳೇ ಮಾತುಗಳನ್ನಾಡಿ ಅವರನ್ನು ಸಂತೋಷಗೊಳಿಸಬೇಕಾದ್ದು ನಮ್ಮ ಕರ್ತವ್ಯ. ಇದನ್ನು ಚೆನ್ನಾಗಿ ನೆನಪಿನಲ್ಲಿಟ್ಟುಕೊಂಡಿರು.

ನಾರಿ:— ಮನೋಹರ, ಫಲಿತಾಂಶವಿಲ್ಲದ ಒಣಮಾತುಗಳಿಂದ ಯಾರಿಗಾದರೂ ಸಂತೋಷವಾಗುತ್ತದೆಯೆ? ಅವರು ಕೇಳಿದ್ದನ್ನು ಕೊಟ್ಟರಲ್ಲವೇ ಅವರಿಗೆ ಸಂತೋಷ? ಆದ್ದರಿಂದ ಮುಂದೆ ಅವರು ಬಂದಾಗ್ಯೂ ಅವರ ಸಂತೋಷಾರ್ಥವಾಗಿ ಕೇಳಿದ್ದನ್ನು ಕೊಡುತ್ತೀರೇನು? ಹಾಗಿದ್ದಲ್ಲಿ ನಿಮ್ಮ ವ್ರತವೇನಾಯಿತು?

ಮಾರ:—ಕೊಡುವುದೇ? ಕೊಡುವುದೆಂದರೆ ಕೈ ಕೊಡುವುದೇ? ಸುಮ್ಮನೆ ಒಳ್ಳೆಯ ಮಾತುಗಳನ್ನಾಡಿದ್ದರಿಂದ ನಷ್ಟವೇನು? ಇನ್ನು ಮುಂದೆಯಂತೂ ನಮ್ಮ ಸತ್ವಪರೀಕ್ಷಾ ಕಾಲವಾದ್ದರಿಂದ ನಾವು ಯಾರಿಗೂ ಏನನ್ನೂ ಕೊಡಲೇಕೂಡದು. ಹಾಗೇನಾದರೂ ಕೊಟ್ಟು ವ್ರತಭಂಗಮಾಡಿಕೊಂಡು ಸತ್ವಹೀನರಾದಲ್ಲಿ ಸರ್ವೇಶ್ವರನು ನಮ್ಮನ್ನು ಕೈಹಿಡಿಯಲಾರನು. ಆದ್ದರಿಂದ ಯಾರೇ ಬರಲಿ ಒಳ್ಳೆಯ ಮಾತುಗಳಿಂದಲೇ ಸಮಾಧಾನಪಡಿಸುತ್ತಿರಬೇಕು.

ನಾರಿ:—ಹಾಗಾದರೆ, ಪ್ರಭು, ಇಷ್ಟು ತಿಳಿದ ನೀವು ಆತನು ನಿಮ್ಮಲ್ಲಿಗೆ ಬಂದಾಗಲೇ ಆತನಿಗೇನನ್ನೂ ಕೊಡದೇ ಇರುವುದಕ್ಕೇನು ಬೇಕೋ ಅದನ್ನು ಹೇಳಿ ಒಳ್ಳೇ ಮಾತಿನಿಂದ ಬರಿಗೈಯಿಂದಲೇ ಕಳುಹಿಸಬಹುದಾಗಿತ್ತು. ಹಾಗೆ ಮಾಡದೆ ಫಲಗಾಲದಲ್ಲಿ ಸೇರು ನವಣೆ ಕೊಡುವುದಾಗಿ ಏಕೆ ವಾಗ್ದಾನಮಾಡಿದಿರಿ? ಈಗ ಅದರಂತೆ ನಡೆಯದಿದ್ದರೆ ಅಸತ್ಯವನ್ನಾಡಿದ ಪಾಪವು ಘಟಿಸುವುದಿಲ್ಲವೇ?

ಮಾರ:—ನಾನು ಮೊದಲೇ ಹೇಳಲಿಲ್ಲವೆ ನಾಸ್ತಿಯೆನ್ನಲು ನಾಲಗೆ ಏಳಲಿಲ್ಲವೆಂದು. ಅಲ್ಲದೆ ನಾನು ಮಾತುಕೊಡುವಾಗ್ಯೆ ಬಹುದೂರ ಯೋಚಿಸಿ ಮಾತುಕೊಟ್ಟಿದ್ದೇನೆ. ಕೊಡುವುದಾದರೂ ಈ ದಿನವೇ ಕೊಡುತ್ತೇನೆಂದು ಹೇಳಿಲ್ಲ. ಇನ್ನೂ ನಾಲ್ಕು ತಿಂಗಳ ಅವಧಿ ಇದೆ. ಈ ಅವಧಿಯೊಳಗಾಗಿ ಅಸ್ಥಿರ ಜೀವಿಗಳಾದ ನಾವಾದರೂ ಸತ್ತುಹೋಗಬಹುದು. ಅಥವಾ ಆ ಜಂಗಮಯ್ಯನು ಸಾಮಾನ್ಯ ಮನುಷ್ಯನೇ ಆಗಿದ್ದಲ್ಲಿ ಆತನಾದರೂ ಮೃತಿಹೊಂದಬಹುದು. ಹಾಗಲ್ಲದೆ ಉಭಯರೂ ಜೀವದಿಂದ್ದಾಗ್ಯೂ ಅನೇಕ ಕಡೆ ಸಂಚಾರಮಾಡುವ ಆತನು ನಮ್ಮ ವಿಷಯವನ್ನು ಮರೆಯಬಹುದು. ಒಂದುವೇಳೆ ಜ್ಞಾಪಕವಿದ್ದರೂ ನಾನು ಕೊಡುತ್ತೇನೆಂದು ಹೇಳಿರುವ ಒಂದು ಸೇರು ನವಣೆಯ ಅಲ್ಪ ಭಿಕ್ಷಕ್ಕಾಗಿ ಇಷ್ಟು ದೂರ ಬರಲಾರದೆ, ಉದಾಸೀನಮಾ

ಡಬಹುದು. ಅಥವಾ ಬಂದರೂ ನಾನೇ ಎಲ್ಲಿಯಾದರೂ ತಲೆಮರೆಯಾಗಬಹುದು. ಹೀಗೆ ಅನೇಕ ಭಾಗಗಳಲ್ಲಿ ಯೋಚಿಸಿ ಮಾತುಕೊಟ್ಟಿದ್ದೇನೆ. ಬರಿಯ ಮಾತೇ ಅಲ್ಲದೆ ನಾನು ಕೊಡುವುದೂ ಇಲ್ಲ. ಆತನು ತೆಗೆದುಕೊಳ್ಳುವುದೂ ಇಲ್ಲ.

ಮಾರಿ:— ಏನಾದರೂ ಸರಿಯೇ. ವ್ರತವನ್ನೇನೋ ಬಿಡಬಾರದು. ಭೋಜನಕ್ಕೆ ಹೊತ್ತಾಯಿತು ಇನ್ನು ಹೋಗೋಣ ನಡೆ.

ಮಾರ:—ಆಗಲಿ ನಡೆ ಹೋಗೋಣ (ಹೋಗುವರು)

## ೪ ನೇ ಪ್ರವೇಶ

ನಾರದ:—(ಪ್ರವೇಶಿಸಿ) ಪಂಚಚಾಮರ ವೃತ್ತ

ಸುರಾಸುರೇಂದ್ರ ವಂದಿತಾಂಘ್ರಿ ಕಂಜಯುಗ್ಮ ಶ್ರೀಧರಂ|
ಧರಾಸರೋಜ ಪುತ್ರಿಕಾ ಮನೋಹರಂ ಕೃಪಾಕರಂ ||
ಪರಾತ್ಪರಂ ನಿರಂಜನಂ ಮುರಾದಿ ದೈತ್ಯ ಭಂಜನಂ |
ಹರಿಂ ಚರಾಚರಾಂತರಂ ನಮಾಮ್ಯಹಂ ನಿರಂತರಂ ||

ನನ್ನಿಂದ ಕೆರಳಿಸಲ್ಪಟ್ಟ ಮಹಾದೇವನು ಇಕ್ಕದ ಮಾರನಿಂದ ಭಿಕ್ಷವನ್ನು ತರುವೆನೆಂದು ಹೋದವನು ಏನು ಮಾಡಿಕೊಂಡು ಬಂದನೋ ತಿಳಿಯದು. ಶತಸಹಸ್ರ ವರ್ಷಗಳು ಪರ್ಣಾಹಾರಿಗಳಾಗಿ ತಪಸ್ಸುಮಾಡಿದ ಯೋಗಿಗಳಿಗೂ ಗೋಚರನಾಗದೆ ಇರುವ ಪರಶಿವನು ಸಾಮಾನ್ಯ ಮನುಷ್ಯನಂತೆ ತಾನೇ ಮನೆಯ ಬಾಗಿಲಿಗೆ ಬಂದು ಭಿಕ್ಷೆಯನ್ನು ಬೇಡುವುದೆಂದರೆ ಇಕ್ಕದ ಮಾರನು ನಿಜವಾಗಿಯೂ ಪರಮಧನ್ಯನೇ ಸರಿ. ಮುಖ್ಯವಾಗಿ ಯಾವ ಕಾರ್ಯಕ್ಕಾದರೂ ನಿಷ್ಠೆಯೂ ಮನಶ್ಶುದ್ಧಿಯೂ ಬೇಕು. ಅದಿಲ್ಲದವರಿಗೆ ಯಾವ ಕೆಲಸಕ್ಕೆ ಕೈ ಹಾಕಿದರೂ ಸಾಗುವುದೇ ಇಲ್ಲ. ಇದೋ, ಮಹಾನುಭಾವನಾದ ಪರಮೇಶ್ವರನು ಕ್ಷುದ್ರ ಜಂಗಮನಂತೆ ಇತ್ತಲೇ ಬರುತ್ತಿರುವನು. ಆತನ ಭಕ್ತ ವಾತ್ಸಲ್ಯಕ್ಕೆ ಇದು ತಕ್ಕದ್ದೇ ಸರಿ.

ಈಶ್ವರ:—(ಪ್ರವೇಶಿಸಿ) ವಿಧಾತನು ಇಕ್ಕದ ಮಾರ ಕೊಡದ ಮಾರಿಯರಿಬ್ಬರನ್ನೂ ಸರಿಯಾಗಿಯೇ ಜೊತೆಗೂಡಿಸಿರುವನು ಸತಿಗಿಂತಲೂ ಪತಿ, ಪತಿಗಿಂತಲೂ ಸತಿ. ಒಬ್ಬರಿಗಿಂತಲೂ ಒಬ್ಬರು ವಿಲಕ್ಷಣ ಇದ್ದದ್ದರಲ್ಲಿ ಗಂಡನೇ ಉತ್ತಮ. ಎರಡು ಒಳ್ಳೆಯ ಮಾತುಗಳನ್ನಾದರೂ ಆಡಿದನು. ಆ ಮಹಾತಾಯಿಯಾದರೋ ಚೆನ್ನಾಗಿ ಪಿತ್ತವನ್ನೇ ಇಳಿಸಿಬಿಟ್ಟಳು. ಆಗಿನ ನನ್ನ ಅವಸ್ಥೆಯನ್ನು ಏನು ಹೇಳುವುದು! ಬಾಯಿಬಿಟ್ಟರೆ ಬಣ್ಣಗೇಡು. ಇಂಥಾವರಿಂದ ಭಿಕ್ಷವನ್ನು ತರುವೆನೆಂದು ನಾನು ಪ್ರತಿಜ್ಞೆಮಾಡಿದ್ದೇ ಸಾಮಾನ್ಯ. ಮುಂದೇನು ಮಾಡಬೇಕೋ ತೋಚದಾಗಿದೆ.

ನಾರದ:—(ಎದುರಿಗೆ ಬಂದು) ಪ್ರಭೋ ವಂದಿಸುವೆನು.

ಈಶ್ವರ:— ಶುಭಮಸ್ತು. ನಾರದ, ನೀನೆಲ್ಲಿಂದ ಬಂದೆ? ವಿಶೇಷ ವರ್ತಮಾನವೇನಾದರೂ ಉಂಟೆ?

ನಾರದ:— ಪ್ರಭು, ಸದಾ ಸಂಚಾರಿಯಾದ ನಾನು ಎಲ್ಲೆಲ್ಲಿಯೋ ಸುತ್ತಿ ಈ ಮಾರ್ಗವಾಗಿ ಬರುತ್ತಾ ನಿನ್ನ ದರ್ಶನವಾದ್ದರಿಂದ ನಿಂತೆನು. ನೀನು ಹೋದ ಕಾರ್ಯವೇನಾಯಿತು? ಇಕ್ಕದಮಾರನನ್ನು ನೋಡಿದ್ದೆಯಾ?

ಈಶ್ವರ—ಆಹಾ, ಕಣ್ತಣಿಯುವಷ್ಟು ನೋಡಿದ್ದೆನು. ಭಕ್ತನೆಂದರೆ ಅವನೇ ಸರಿ, ಭಕ್ತೆಯೆಂದರೆ ಅವನ ಹೆಂಡತಿಯೇ ಸರಿ.

ನಾರದ:—ಅದೇಕೆ! ನಡೆದ ಸಮಾಚಾರವೇನು? ದಯವಿಟ್ಟು ತಿಳಿಸು.

ಈಶ್ವರ:— ನಾನು ಹೋಗಿ ನೋಡಿದಾಗ್ಯೆ ಆತನು ತನ್ನ ಹೊಲದಲ್ಲಿ ಕೆಲಸಮಾಡುತ್ತಿದ್ದನು. ನನ್ನನ್ನು ಕಾಣುತ್ತಲೆ ತನ್ನ ಕೆಲಸವನ್ನು ಬಿಟ್ಟು ಬಂದು ನನಗೆ ನಮಸ್ಕಾರಮಾಡಿ ಮೃದುಮಧುರವಾಗಿ ಮಾತುಕಥೆಗಳನ್ನಾಡಿದನು. ಅವನ ಆದರ ಸತ್ಕಾರಗಳನ್ನು ನೋಡಿ ಇಂತಹ ಉತ್ತಮನ ವಿಷಯದಲ್ಲಿ ನಾರದನು ಎಂತಹ ಅಭಿಪ್ರಾಯಪಟ್ಟನಲ್ಲಾ ಎಂದು ನನಗೆ ಅನ್ನಿಸಿತು.

ನಾರದ—ಸರಿ, ಅನಂತರ ನಡೆದದ್ದೇನು?

ಈಶ್ವರ.—ನಾನು ಅವನಲ್ಲಿ ಭಿಕ್ಷವನ್ನು ಯಾಚಿಸಿದೆನು. ಆಗ ನಿನ್ನ ಮಾತು ನಿದರ್ಶನಕ್ಕೆ ಬಂತು.

ನಾರದ.—ಏಕೆ? ಏನಾಯಿತು?

ಈಶ್ವರ:—ಕೇಳು. ಅವನ ಹೊಲಕ್ಕೆ ಕಳ್ಳಕಾಕರಾಗಲಿ ಕಾಡುಮೃಗಗಳಾಗಲಿ ಪ್ರವೇಶಿಸದಂತೆಯೂ ಕಾಲಕಾಲಕ್ಕೆ ಸುವೃಷ್ಟಿಯಾಗುವಂತೆಯೂ, ಅತಿ ವೃಷ್ಟ್ಯನಾವೃಷ್ಟಿಗಳಾಗದಂತೆಯೂ, ಪೂರ್ಣ ಫಲವಾಗುವಂತೆಯೂ ನಾನು ಅನುಗ್ರಹಿಸಿದರೆ ಫಲ ಬಂದಾಗ್ಯೆ ಒಂದೇ ಒಂದು ಸೇರು ನವಣೆಯನ್ನು ಕೊಡುವುದಾಗಿ ಹೇಳಿದನು. ಅವನಿಂದ ಏನ್ನಾದರೂ ಆಗಲಿ–ಭಿಕ್ಷವನ್ನು ತರಬೇಕಾದುದು ಮುಖ್ಯೋದ್ದೇಶವಾದುದರಿಂದ ನಾನು ಅದಕ್ಕೆಲ್ಲಾ ಒಪ್ಪಿದೆನು.

ನಾರದ.—ಆಮೇಲೇನಾಯಿತು?

ಈಶ್ವರ:— ಆಮೇಲೆ ಈ ಮಹಾನುಭಾವನ ಪತ್ನಿ ಎಂಥವಳೋ ನೋಡಬೇಕೆಂದು ಅಲ್ಲಿಗೆ ಹೋದೆನು. ಆಕೆಯಾದರೋ ಕಡ್ಡಿಮುರಿದಂತೆ ಮಾತನಾಡಿ ಭಿಕ್ಷವನ್ನೂ

ಕೊಡದೆ ಚೆನ್ನಾಗಿ ಮುಖಭಂಗಮಾಡಿ ಕಳಿಸಿಬಿಟ್ಟಳು. ಅವರಿಂದ ಭಿಕ್ಷವನ್ನು ತರುವುದೇನೋ ಕೇವಲ ಕಷ್ಟ ಸಾಧ್ಯವಾದ ವಿಷಯವೇ ಸರಿ.

ನಾರದ :—ಹಾಗಾದರೇನುಮಾಡುವೆ ? ಈ ಪ್ರಯತ್ನವನ್ನೇ ಬಿಡುವೆಯೇನು ?

ಈಶ್ವರ :—ಬಿಡುವುದು ಸಾಧ್ಯವಿಲ್ಲ. ಕಡೆಯುವರೆಗೂ ಪ್ರಯತ್ನಿಸಲೇಬೇಕು. ಸುಗ್ಗಿಯಲ್ಲಿ ಬರಬೇಕೆಂದು ಮಾರನು ಹೇಳಿದ್ದಾನೆ. ಅದೂ ಬಂದವಧಿಗೆ ಸರಿಯಾಗಿ ಹೋಗಿ ನೋಡೋಣ. ಇನ್ನೇನು ಅದೂ ಸಮೀಪಕ್ಕೇ ಬಂತು.

ನಾರದ :—ದೇವ.

ಕಂದ|| ಬರಿದೇತಕೆ ಶಂಕರ ನೀಂ |
ಪಿರಿದಾಯಸಗೊಳುವೆ ನಿನಗೆ ಧಾನ್ಯಮುದೆಂದುಂ ||
ದೊರೆಯುದು ದಿಟ, ಕೆಮ್ಮನೆ ಪಿಂ |
ದಿರುಗೈ ಕೈಲಾಸಗಿರಿಗೆ ಸೊಗಮಿರು ಮನೆಯೊಳ್ ||

ಈಶ್ವರ :—ನಾರದ, ಎಂಥಾ ಮಾತನಾಡಿದೆ. ಯಃಕಶ್ಚಿತನಾದೊಬ್ಬ ಮನುಷ್ಯನ ವಿಷಯದಲ್ಲಿ ಮಾಡಿದ ಪ್ರತಿಜ್ಞೆಯನ್ನೇ ನೆರವೇರಿಸದಿದ್ದಮೇಲೆ ಫಲವೇನು ? ನಾನು ನನ್ನ ಪ್ರಯತ್ನದಲ್ಲಿ ಜಯಶಾಲಿಯಾಗಲಾರೆನೆಂಬ ಅನುಮಾನವನ್ನು ಬಿಡು. ನೀನು ಹೊರಡಬಹುದು. ನನಗೆ ಬಹಳ ಹೊತ್ತು ನಿಲ್ಲಲು ವ್ಯವಧಾನವಿಲ್ಲ. ನಾನು ಹೊರಡುವೆನು. (ಹೋಗುವನು)

ನಾರದ :— ಜಗತ್ಪ್ರಭು, ನಿನ್ನ ಭಕ್ತವಾತ್ಸಲ್ಯವು ಅಪಾರವಾದದ್ದು. ಹಾಗಿಲ್ಲದಿದ್ದರೆ ಅಲ್ಪವಾದ ಜಂಗಮನಂತೆ ವೇಷಧಾರಿಯಾಗಿ ಅಲೆಯುತ್ತಿದ್ದೆಯಾ ? ಮಹಾನುಭಾವನೇ, ನಿನ್ನ ಕೃಪಾದೃಷ್ಟಿಯನ್ನು ಸಂಪೂರ್ಣವಾಗಿಯೂ ಆಕರ್ಷಿಸಿರುವ ಇಕ್ಕದಮಾರನಿನ್ನೆಷ್ಟು ಧನ್ಯನೋ? ದಯಾಮಯಾ—ಹೀಗೆಯೇ ಲೋಕವನ್ನೆಲ್ಲಾ ಅನುಗ್ರಹಿಸು.

(ಹೋಗುವನು)

## ಮೂರನೆಯ ಅಂಕವು

### ೧ ನೆಯ ಪ್ರವೇಶ

[ಕಣದಲ್ಲಿ ಇಕ್ಕದಮಾರನು ಸ್ವಲ್ಪ ಧಾನ್ಯವನ್ನು ಇಟ್ಟುಕೊಂಡಿರುವನು]

ಮಾರ .— ಗುರುವಿನ ಅನುಗ್ರಹವು ಮಹತ್ತರವಾದುದು. ಈ ಸಾರೆ ಪೂರ್ಣವಾದ ಬೆಳೆಯಾಯಿತು. ಎಂದಿಗಿಂತಲೂ ಧಾನ್ಯವು ಹೆಚ್ಚಾಗಿದೆ. ಎಲ್ಲವನ್ನೂ ಕಣಜಕ್ಕೆ ಸಾಗಿಸಿದ್ದಾಯಿತು. ಇದು ಸ್ವಲ್ಪಮಾತ್ರವಿದೆ. ಇದನ್ನೂ ತೆಗೆದುಕೊಂಡು ಹೋಗೋಣ. (ಬುಟ್ಟಿಗೆ ತುಂಬುತ್ತಿರುವನು)

ಈಶ್ವರ :— (ಪ್ರವೇಶಿಸಿ) ಓಹೋ, ಕಣವೆಲ್ಲಾ ಬರಿದಾಗಿದೆ. ಧಾನ್ಯವು ಇನ್ನು ಸ್ವಲ್ಪಮಾತ್ರವೇ ಇದೆ. ಆಗಲಿ. ಎಷ್ಟಿದ್ದರೇನು ? ನನಗೆ ಬೇಕಾದ್ದು ಒಂದೇ ಸೇರು ತಾನೆ. ಭಕ್ತನ ಬಳಿಗೆ ಹೋಗಿ ಯಾಚಿಸುವೆನು. (ಮಾರನ ಎದುರಿಗೆ ಬಂದು) ಶಿವಶಿವಾ, ಕೋರನ್ನದಲ್ಲಿ ಭಿಕ್ಷ !

ಮಾರ:—(ಸ್ವಗತ) ಅಯ್ಯೋ ಶಿವನೇ, ಅಯ್ಯನವರು ಬಂದೇ ಬಿಟ್ಟರಲ್ಲಾ. ಇನ್ನೊಂದು ಗಳಿಗೆ ತಡಮಾಡಬಾರದಾಗಿತ್ತೆ ! ಈಗೇನುಮಾಡಲಿ ? ಕಣ್ಣೆದುರಿಗೆ ದವಸವಿದೆ. ಕೊಡದಿದ್ದರೆ ನಿರ್ವಾಹವಿಲ್ಲ. ಕೊಟ್ಟರೆ ವ್ರತದ ಗತಿ ಏನು? ಕೊಡದೇ ಇದ್ದರೆ ವಚನ ಭಂಗದೋಷವು ತಟ್ಟುವುದು. ಅಯ್ಯೋ ! ಎಂಥಾ ಸಂಕಟ ಬಂತು. (ಯೋಚಿಸಿ) ಆಗಲಿ ಈಗ ಹೆದರಿದರೆ ಉಪಯೋಗವಿಲ್ಲ. ಏನಾದರೂ ಉಪಾಯಮಾಡಿ ಈ ಜಂಗಮಯ್ಯನವರನ್ನು ಉಪಾಯದಿಂದ ಕಳಿಸಿಕೊಡಬೇಕು. (ಸಮೀಪ ಬಂದು) ಗುರುವೇ ಶರಣು.

ಈಶ್ವರ .—ಕಲ್ಯಾಣ. ಅಪ್ಪಾ ಭಕ್ತ, ಇದೋ, ನಿನ್ನ ಮಾತಿನಂತೆ ಫಲಗಾಲಕ್ಕೆ ಬಂದಿದ್ದೇನೆ. ಎಲ್ಲಿ ಸೇರು ನವಣೆ ?

ಮಾರ :—ಗುರುವೇ ತಾವೇನೋ ಕಾಲಕ್ಕೆ ಸರಿಯಾಗಿಯೇ ಬಂದಿರಿ. ನಾನೂ ಕೊಡಬೇಕಾದ್ದೇ ನ್ಯಾಯ. ಆದರೆ ಒಂದು ಆತಂಕವಿದೆ.

ಈಶ್ವರ .—ಅದೇನಯ್ಯಾ ಪುನಃ ಆತಂಕ ? ನಿನ್ನ ಕೋರಿಕೆಯಂತೆ ಪೂರ್ಣಫಲವಾಯಿತೋ ಇಲ್ಲವೋ ?

ಮಾರ :— ಪ್ರಭು, ತಮ್ಮಂಥಾ ಮಹನೀಯರ ಆಶೀರ್ವಾದ ಸುಳ್ಳಾದೀತೆ ? ಈ ಸಾರೆ ದಿವ್ಯವಾದ ಫಲವಾಗಿದೆ.

ಈಶ್ವರ :— ಹಾಗಾದರೆ ನಮಗೆ ವಾಗ್ದಾನಮಾಡಿರುವ ನವಣೆಯನ್ನು ಕೊಡುವುದಕ್ಕೆ ಅಡ್ಡಿಯೇನು ?

ಮಾರ —ಅಡ್ಡಿಯೇನೂ ಇಲ್ಲ. ತಾವು ಇಷ್ಟು ದೂರ ಕಷ್ಟಪಟ್ಟುಕೊಂಡು ಬಂದು ಭೋಜನವಿಲ್ಲದೆ ಹೊರಟುಹೋದರೆ ನನ್ನ ಮನಸ್ಸಿಗೆ ಸಮಾಧಾನವಾಗಲಾರದು. ಪ್ರಯುಕ್ತ ತಾವು ಅಗೋ ಅಲ್ಲಿ ಕಾಣುವ ಕೊಳದಲ್ಲಿ ತಮ್ಮ ನಿತ್ಯಕರ್ಮಗಳನ್ನು ತೀರಿಸಿಕೊಂಡು ಬರೋಣವಾಗಲಿ. ಭೋಜನಾನಂತರ ನವಣೆ ವಿಚಾರವನ್ನು ಯೋಚಿಸೋಣ. ನಾನು ಮನೆಗೆ ಹೋಗಿ ಅಡುಗೆಯನ್ನು ಮಾಡಿಸುತ್ತೇನೆ.

ಈಶ್ವರ :— ಹಾಗೂ ಆಗಬಹುದು. ಅಧಿಕಸ್ಯ ಅಧಿಕಂ ಫಲಂ (ಹೋಗುವನು)

ಮಾರ :— ಏನಾಶ್ಚರ್ಯವಿದು. ಈ ಜಂಗಮಯ್ಯನವರು ಒಂದು ಸೇರು ನವಣೆಗಾಗಿ ಎಷ್ಟೋ ಕಷ್ಟಪಟ್ಟುಕೊಂಡು ಇಷ್ಟು ದೂರ ಬಂದು ಯಾಚಿಸುವುದನ್ನು ನೋಡಿದರೆ

ನಮ್ಮ ಸತ್ವಪರೀಕ್ಷೆಗಾಗಿ ಈಶ್ವರನೇ ಈ ವೇಷದಿಂದ ಬಂದಿರಬೇಕೆಂದು ಸ್ಪಷ್ಟವಾಗಿ ತೋರುತ್ತದೆ. ಇದೇ ನಿಜ. ಜಗದೀಶ್ವರ, ನೀನು ಜಗದೀಶ್ವರನೆಂಬ ಮಾತು ನಿದರ್ಶನಕ್ಕೆ ಬಂದುದು. ಅಲ್ಪ ಸತ್ವನಾದ ನನ್ನನ್ನು ಎಷ್ಟು ದೂರ ಒರೆಗೆ ಹಚ್ಚಬೇಕೆಂದಿರುವೆಯೋ ಏನೋ? ಆಗಲಿ. ನಿನ್ನಲ್ಲಿ ನಿಜವಾದ ಭಕ್ತಿಯು ನನಗಿದ್ದದ್ದೇ ಆದರೆ ನಿನ್ನನ್ನೇ ಪರಾಜಿತನನ್ನಾಗಿ ಮಾಡುವೆನೇ ಹೊರತು ನಾನು ಬೇರೆ ಸೋಲುವುದಿಲ್ಲ. ಇರಲಿ. ಧಾನ್ಯವನ್ನು ಮೊದಲು ಇಲ್ಲಿಂದ ಸಾಗಿಸಿ ಮನೆಯಲ್ಲಿ ಭದ್ರಪಡಿಸಿ ನಂತರ ಮುಂದಿನ ಯೋಚನೆಯನ್ನು ಮಾಡುವೆನು. (ಹೋಗುವನು)

## ೨ನೇ ಪ್ರವೇಶ

(ಸ್ವಗೃಹದಲ್ಲಿ ಇಕ್ಕದಮಾರ ಕೊಡದಮಾರಿಯರು)

ಮಾರ.—ಸತಿ, ಪುನಃ ವಿಪತ್ತು ಬಂತು.

ಮಾರಿ —ಅಂಥಾದ್ದೇನು?

ಮಾರ:—ಮೊದಲು ಇಲ್ಲಿಗೆ ಬಂದಿದ್ದ ಜಂಗಮಯ್ಯನವರು.

ಮಾರಿ:—ಏನು? ಜಂಗಮಯ್ಯನವರೆ? ಮತ್ತೂ ಬಂದು ಬಿಟ್ಟರೆ? ಶಿವಶಿವಾ ಮುಂದೇನುಗತಿ?

ಮಾರ:—ಪರಮೇಶ್ವರನೇ ಗತಿ. ಮೊದಲು ವಾಗ್ದಾನಮಾಡಿದ್ದ ಧಾನ್ಯವನ್ನು ಭೋಜನಾನಂತರ ಕೊಡುವುದಾಗಿ ಹೇಳಿದ್ದೇನೆ. ಭೋಜನಕ್ಕೂ ಇಲ್ಲಿಗೇ ಬರಬೇಕೆಂದು ಹೇಳಿದ್ದೇನೆ.

ಮಾರಿ.—ಬಹಳ ಚೆನ್ನಾಯಿತು. ಕುರುವಿನಮೇಲೆ ಬೊಕ್ಕೆಯೆದ್ದಿತೆಂಬಂತೆ ಮೊದಲು ನವಣೆಯನ್ನು ಕೊಡುವೆನೆಂದು ಹೇಳಿ ತಂದಿಟ್ಟುಕೊಂಡ ಧರ್ಮಸಂಕಟದ ಜೊತೆಗೆ ಊಟವನ್ನಿಕ್ಕುವದೊಂದು ಧರ್ಮಸಂಕಟವನ್ನು ಬೇರೆ ತಂದಿಟ್ಟುಕೊಂಡೆಯಲ್ಲ. ಈಗೇನುಮಾಡತಕ್ಕದ್ದು.

ಮಾರ.— ರಮಣಿ, ಭಯಪಡಬೇಡ. ನಾನು ಮೊದಲೇ ಹೇಳಿದಂತೆ ಇದು ನಮ್ಮ ಪರೀಕ್ಷಾಕಾಲ. ಆದ್ದರಿಂದ ಒಂದರ ಹಿಂದೆ ಮತ್ತೊಂದರಂತೆ ತೊಂದರೆಗಳು ಬರುವುದೇ ನಿಶ್ಚಯ. ಇದೆಲ್ಲವೂ ನಮ್ಮ ಯತ್ನವನ್ನು ಮೀರಿದ ದೈವೇಚ್ಛೆ. ಭಕ್ತರ ಸತ್ವವನ್ನು ಒರೆಗೆ ಹಚ್ಚಲು ಪರಮೇಶ್ವರನೇ ಇಂತಹ ವಿಷಯಸಂಕಟಗಳನ್ನು ತಂದೊಡ್ಡುವನು. ಅವುಗಳಿಗೆ ಹೆದರಿ ನಾವು ಸತ್ವಹೀನರಾದರೆ ಇಹಪರಗಳೆರಡಕ್ಕೂ ಬಾಹಿರರಾಗುವೆವು. ಪ್ರಯುಕ್ತ ಬಂದ ಸಂಕಟಗಳಿಗೆ ಧೈರ್ಯದಿಂದ ಎದೆಗೊಡಬೇಕು. ಈಗ ಹೇಳು. ಸದ್ಯದ ವಿಪತ್ತಿನಿಂದ ಪಾರಾಗುವುದು ಹೇಗೆ?

ಮಾರಿ:—ನಾಥ, ಈ ದಿನ ಕಾರ್ತಿಕ ಸೋಮವಾರ. ಮಲ್ಲಿಕಾರ್ಜುನಸ್ವಾಮಿಗೆ ಮುಂಡೆಯನ್ನೊಪ್ಪಿಸಬೇಕೆಂಬ ನಿನ್ನ ಹರಕೆಯೊಂದು ಇದೆಯಷ್ಟೆ. ತನ್ಮೂಲಕ ಸದ್ಯಕ್ಕೆ ಈ ಜಂಗಮಯ್ಯನವರ ಕಾಟವನ್ನು ತಪ್ಪಿಸಿಕೊಳ್ಳಬಹುದು.

ಮಾರ:—(ಯೋಚಿಸಿ) ಹೌದು. ಮರತೇಬಿಟ್ಟಿದ್ದೆನಲ್ಲಾ. ಸರಿಯಾದ ಸಮಯಕ್ಕೆ ಜ್ಞಾಪಿಸಿದೆ. ಇಲ್ಲವಿದ್ದರೆ ಹರಕೆ ತಪ್ಪಿಹೋಗುತ್ತಿತ್ತು. ಹಾಗೆ ಮಾಡುವುದರಿಂದ ತೊಂದರೆಯೂ ತಪ್ಪುತ್ತದೆ. ಪ್ರಭುದರ್ಶನವೂ ಆಗುತ್ತದೆ. ಕಾರ್ಯವೊಂದು. ಫಲವೆರಡು. ಸತಿ, ಪಾಥೇಯವನ್ನು ಕಟ್ಟಿಡು. ಅವರು ಬರುವ ಹೊತ್ತಾಯಿತು. ಬಂದ ಕೂಡಲೇ ಕಪಟನಾಟಕವನ್ನು ಮಾಡಿ ಸಮಯಕ್ಕೆತಕ್ಕಂತೆ ಮಾತನಾಡಿ ತಪ್ಪಿಸಿಕೊಳ್ಳೋಣ. ಜಾಗರೂಕಳಾಗಿರು.

ಈಶ್ವರ.—(ಪ್ರವೇಶಿಸಿ) ಭಕ್ತಾ, ನನಗಾಗಿ ಬಹಳಹೊತ್ತು ಕಾದಿದ್ದೆಯೋ ಏನೋ? ನಿನಗೆ ತುಂಬಾ ತೊಂದರೆಯಾದಂತಾಯಿತು. ಇನ್ನು ಭೋಜನಕ್ಕೆ ಕುಳಿತುಕೊಳ್ಳಬಹುದಲ್ಲವೆ?

ಮಾರಿ.—ನಾಥ, ಈ ಅಯ್ಯನವರಿಗೆ ಊಟಕ್ಕೆ ಹೇಳಿದ್ದೀರಾ?

ಮಾರ —ಹೌದು, ಏಕೆ?

ಮಾರಿ —ಬಹಳ ಒಳ್ಳೆಯ ಕೆಲಸ ಮಾಡಿದಿರಿ. ಈ ದಿನ ಕಾರ್ತಿಕ ಸೋಮವಾರವಲ್ಲವೆ? ಹರಕೆಯಂತೆ ಮಲ್ಲಿಕಾರ್ಜುನ ಸ್ವಾಮಿಗೆ ಮುಂಡೆಯನ್ನೊಪ್ಪಿಸದೆ, ನೈವೇದ್ಯವಿಡದೆ, ಎರಡನೆಯವರಿಗೆ ಊಟಕ್ಕೆ ಹಾಕುವುದು ಹೇಗೆ? ನಾವು ತಾನೆ ಭೋಜನ ಮಾಡುವುದು ಹೇಗೆ? ನೈವೇದ್ಯಕ್ಕೆಲ್ಲಾ ಸಿದ್ಧಪಡಿಸಿದ್ದೇನೆ. ಸ್ನಾನ ಮಾಡಿಕೊಂಡು ಬೇಗ ಹೊರಡಬಾರದೆ. ಮಧ್ಯಾಹ್ನವಾಗುತ್ತಾ ಬಂತು.

ಮಾರ ಹೌದು, ಹೌದು, ನಾನು ಹರಕೆಯ ವಿಷಯವನ್ನೇ ಮರೆತುಬಿಟ್ಟಿದ್ದೆ. ನಿನಗಾದರೂ ಜ್ಞಾಪಕ ಬಂದದ್ದು ಒಳ್ಳೆಯದಾಯಿತು. ಈಗಲೇ ಹೊರಡುತ್ತೇನೆ. ಆದರೆ-ಗುರುಗಳಿಗೆ ಭೋಜನಕ್ಕೆ ಗತಿ? ಶ್ರೀ ಶೈಲಗಿರಿ ಇಲ್ಲಿಗೆ ಒಂದು ಗಾವುದವಿದೆ. ಹಸಿವೆಗೊಂಡು, ಒಂದು ತುತ್ತನ್ನಕ್ಕಾಗಿ ಗುರುಗಳು-ಪಾಪ!-ಅಷ್ಟು ದೂರ ಉರಿಬಿಸಿಲಿನಲ್ಲಿ ನಡೆದು ಬರಲಾದೀತೆ? ಅಯ್ಯೋ! ಎಂತಹ ಅಸಾನುಕೂಲ ಸಂಭವ ಬಂತು.

ಈಶ್ವರ:—ಏನಯ್ಯಾ, ನೀನೊಳ್ಳೇ ವಿಚಿತ್ರ ಮನುಷ್ಯ. ಯಾವಾಗ ಬಂದರೂ ಏನಾದರೂ ಒಂದು ವಿಘ್ನವನ್ನು ಸಿದ್ಧಗೊಳಿಸಿಯೇ ಇಟ್ಟಿರುತ್ತಿ. ಜಂಗಮಗುರುಗಳು ಶಿವನಿಗಿಂತಲೂ ದೊಡ್ಡವರಲ್ಲವೇ? ನನಗೆ ಭೋಜನ ಮಾಡಿಸಿದರೆ ಶಿವನಿಗೆ ತೃಪ್ತಿಯಾಗುವುದಿಲ್ಲವೆ?

ಮಾರ :— ಪ್ರಭು, ಯಾವ ಗುರುವು ಪ್ರಪಂಚ ಸುಖಗಳಲ್ಲಿ ವಿರಕ್ತನಾಗಿ ಯೋಗಸಿದ್ಧಿಯನ್ನು ಹೊಂದಿ ಆತ್ಮ ಸಾಕ್ಷಾತ್ಕಾರವನ್ನು ತಾನು ಮಾಡಿಕೊಂಡಿರುವುದಲ್ಲದೆ ತನ್ನ ಶಿಷ್ಯರಿಗೂ ಸಹ ಮಾಡಿಕೊಡಲು ಶಕ್ತನೋ ಆ ಮಹಾನುಭಾವನೊಬ್ಬನು ಮಾತ್ರ ಶಿವನಂತೆ ಸೇವ್ಯನೇ ಹೊರತು ಉಳಿದವರು ಹೇಗಾದಾರು ? ಅಲ್ಲದೆ, ಪರಾಪರ ವಸ್ತುವಾದ, ನಿಗಮಾತೀತನಾದ, ನಿಸ್ತ್ರೈಗುಣ್ಯನಾದ ಪರಶಿವನಿಗಿಂತಲೂ, ಸಂಸಾರ ಚಕ್ರದಲ್ಲಿ ಸಿಕ್ಕಿ, ಪ್ರಾಪಂಚಿಕರಾದ ನಮಗಿಂತಲೂ ಹೆಚ್ಚು ಪ್ರಾಪಂಚಿಕರಾಗಿ ತಾಪತ್ರಯಗಳ ಹೊಡತಕ್ಕೆ ತಲೆ ಬಾಗಿ ಹುಳುಗಳಂತೆ ಒದ್ದಾಡುತ್ತಿರುವ ಜಂಗಮರು ದೊಡ್ಡವರಾಗುವುದಾದರೆ ಜಗಚ್ಚಕ್ಷುವಾದ ಭಗವಾನ್ ಭಾಸ್ಕರನಿಗಿಂತಲೂ ಹರಳೆಣ್ಣೆಯ ದೀಪವೇ ಶ್ರೇಷ್ಠವಾಗಬೇಕಾದೀತು. ಹೇಗೆ ದೀಪವು ರಾತ್ರಿಯ ಹೊತ್ತು ಸೂರ್ಯಾಭಾವದಲ್ಲಿ ಅಲ್ಪಕಾಲದವರೆಗೆ ನಮಗೆ ಬೆಳಕನ್ನು ಕೊಟ್ಟು ಸ್ವಲ್ಪಮಟ್ಟಿಗೆ ಸಹಾಯ ಮಾಡಬಲ್ಲದೋ ಹಾಗೆಯೇ ಶಿವಜ್ಞಾನವಿಲ್ಲದೆ ನಾವು ಅಜ್ಞಾನಾಂಧಕಾರದಲ್ಲಿ ಮುಳುಗಿದಾಗ ನಮಗೆ ಸ್ವಲ್ಪಮಟ್ಟಿಗೆ ಜ್ಞಾನಜ್ಯೋತಿಯ ದರ್ಶನವನ್ನು ಮಾಡಿಸಿ ಧನ್ಯತೆಯ ದಾರಿಯನ್ನು ತೋರಿಸುವುದರಿಂದಲ್ಲವೇ, ಪ್ರಭು, ಗುರುಪದವಿಗಿಷ್ಟುಗೌರವ ? ಅಲ್ಲದೆ ಜಂಗಮರು ಶಿವನಿಗಿಂತಲೂ ದೊಡ್ಡವರಾದರೆ ಅವನನ್ನೇ ಅವರು ಪೂಜಿಸಲೇಕೆ? ಇದೆಂತಹ ಅರ್ಥಹೀನವಾದ ಹಿರಿಯತನ. ದೇವ, ನಾನು ಹೇಗೆ ಹೇಗೆ ಯೋಚಿಸಿದರೂ ದೇವಾದಿ ದೇವನಿಗಿಂತಲೂ ಜಂಗಮರು ದೊಡ್ಡವರೆಂಬ ಅಂಥ ತತ್ವವನ್ನು ಒಪ್ಪಲೇ ಆರೆ.

ಈಶ್ವರ :— ಅಯ್ಯಾ, ನಿನ್ನಿಷ್ಟ ಬಂದಂತೆ ಭಾವಿಸಿಕೋ. ಅದರಿಂದ ನನಗಾವ ಲಾಭ ಹಾನಿಗಳೂ ಇಲ್ಲ. ಈಗ ನನ್ನ ಭೋಜನಕ್ಕೇನು ಹೇಳುವೆ ? ಹಸಿವಾದರೋ ತಡೆಯ ಲಾರೆ ಹಾಗಿಲ್ಲ.

ಮಾರ.— ನಾನೇನು ಮಾಡಲಿ ಪ್ರಭು ? ಈಶ್ವರನಿಗೆ ನೈವೇದ್ಯ ಸಮರ್ಪಣೆ ಮಾಡದೆ ಈ ದಿನ ನಿಮಗೂ ಭೋಜನ ಮಾಡಿಸುವಂತಿಲ್ಲ. ನಾವೂ ಮಾಡುವಂತಿಲ್ಲ. ತಾವು ನನ್ನೊಂದಿಗೆ ಶ್ರೀ ಶೈಲಕ್ಕೇನೆ ಬರುವುದಾದರೆ ಅಲ್ಲಿಯೇ ಶಿವನೈವೇದ್ಯ ನಾನಂತರ ನೀಡುವೆನು. ಬಿಸಿಲಿನಲ್ಲಿ ಬರಲು ತಮಗೆ ತೊಂದರೆಯಾಗುವುದಾದರೆ ಇಲ್ಲಿಯೇ ಸಮೀಪದಲ್ಲಿರುವ ಹಳ್ಳಿಯಲ್ಲಿ ಯಾರಾದರೂ ಭಕ್ತನ ಮನೆಗೆ ಹೋಗಬಹುದು.

ಈಶ್ವರ — ಇದೀಗ ಬಹಳ ಚೆನ್ನಾಯಿತು. ಅಯ್ಯಾ ನೀನು ಹರಕೆಯನ್ನು ತೀರಿಸಿಕೊ. ನಾನು ಮತ್ತೊಮ್ಮೆ ನಿನ್ನನ್ನು ನೋಡುತ್ತೇನೆ. (ಹೋಗುವನು)

ಮಾರ :— ಸರಿ. ಈಗ ನಿರಾಳವಾಯಿತು. ನಡೆ ಪಾಥೇಯವನ್ನು ಕೊಡು. ಶ್ರೀ ಶೈಲಗಿರಿಗೆ ಹೊರಡುತ್ತೇನೆ.

ಮಾರಿ :— ಆಗಬಹುದು. ನಡೆ ಹೋಗೋಣ.

(ಹೋಗುವರು)

## ೩ ನೆಯ ಪ್ರವೇಶ

(ಶ್ರೀ ಶೈಲದಲ್ಲಿ ದೇವರ ಸನ್ನಿಧಿಯಲ್ಲಿ)

ಮಾರ.— ಸೀಸ ಪದ್ಯ :—

ಶ್ರೀಶೈಲ ಗಿರಿವಾಸ ತ್ರಿಶಭಕ್ತ ಜನಪೋಷ ಸಾಸಿರಾಕ್ಷಾದಿ
ಸುರವಂದ್ಯ ಶರಣು | ಭೂತೇಶ ಭಯನಾಶ ಭಸಿತಾಂಗ
ಭವಭಂಗ ಭಾಸ್ವಚ್ಚಿದಾನಂದ ಕಂದ ಶರಣು | ದಕ್ಷಾ
ಧ್ವರಾಪಹರ್ತ, ಯಕ್ಷಾದಿ ಗಣಭರ್ತ, ಶಿಕ್ಷಿತಾಖಿಲ ದೈತ್ಯ
ಪಕ್ಷ ಶರಣು | ಸಕಲ ಜಗದಾಧಾರ, ಸಚ್ಚಿದ್ಘನಾಕಾರ
ಸರ್ವೇಶ ಸರ್ವಾತ್ಮ ಸಾಂಬ ಶರಣು |
ಶರಣು ದೀನಜನೌಘಪಾಲ ಶರಣು |
ಶರಣಯ್ಯ ದುರಿತ ಸಂಸಾರ ಶರಣು |
ಶರಣು ಶ್ರೀ ಕೈಲಾಸನಾಥ ಶರಣು |
ಪರಮಪುರುಷನೆ ನಿನಗೆ ಶರಣು ಶರಣು ||

ಕಂದ|| ಪಲವುಂ ಜನ್ಮದೆ ಗಳಿಸಿದ |
ಬಲು ಪುಣ್ಯದ ಬಲದೆ ನಿನ್ನ ಪದಸರಸಿಜಮಂ ||
ಬಲಗೊಂಡೆನಿಂದು ಶ್ರೀ ಗಿರಿ |
ನಿಲಯಾ ಮಹಸೀಯ ಸರ್ವಮಂಗಳೆಯರಸಾ ||

ದೇವಾಧಿದೇವ, ಕೈಲಾಸನಾಥ ! ಕೋಟಿ ಜನ್ಮ ಸುಕೃತದ ಫಲವು ನಿನ್ನ ದರ್ಶನದಿಂದ ನನಗಿಂದು ಲಭಿಸಿತು. ಕೃಪಾನಿಧೇ, ಮನುಷ್ಯರೂಪಧಾರಿಯಾಗಿ ಮನೆಗೆ ಬಂದು ಹಲವು ಬಗೆಯಿಂದ ಧರ್ಮಸಂಕಟಗಳಿಗೆನ್ನನ್ನು ಗುರಿಮಾಡಿ ಮತ್ತವರಿಂದ ಬಿಡಿಸಿಕೊಳ್ಳಲನುಕೂಲಿಸುವಂತೆ ಇಲ್ಲಿ ದಿವ್ಯ ಲಿಂಗರೂಪಧಾರಿಯಾಗಿ ಕುಳಿತಿರುವ ನಿನ್ನ ಮಹಾಮಹಿಮೆಯನ್ನು ಪಾಮರನಾದ ನಾನು ತಿಳಿಯುವುದೆಂತು ? ಪ್ರಭು, ನನ್ನ ಪರೀಕ್ಷೆಗಾಗಿಯೇ ಭಕ್ತವತ್ಸಲನಾದ ನೀನು ನಾನಾ ಬಗೆಯಾದ ಲೀಲೆಗಳನ್ನು ತೋರುತ್ತಲಿರುವೆ. ದೇವಾ, ಕೃಪಾಕಟಾಕ್ಷವೀಕ್ಷಣ ಮಾತ್ರದಿಂದ ಸಹಸ್ರ ಬ್ರಹ್ಮರ ಪದವಿಯನ್ನಾದರೂ ದಯಪಾಲಿಸಬಲ್ಲ ನೀನು ನನ್ನಂತಹ ಹೀನದೀನನ ಮನೆಯ ಬಾಗಿಲಿಗೆ ಬಂದು ಒಂದು ಸೇರು ನವಣೆಯ ಅಲ್ಪ ಭಿಕ್ಷಕ್ಕಾಗಿ

ಬಂದೆಯಲ್ಲವೇ ? ಸ್ವಾಮಿಯೇ, ಭಕ್ತಾಧೀನನೆಂಬ ನಿನ್ನ ಬಿರುದಿನ ಸತ್ಯತೆಯು ನನಗಿಂದು ಹೊಳೆಯಿತು. ವ್ರತವನ್ನು ಮಾಡುವಂತೆ ಪ್ರೇರಿಸಿದವನು ನೀನು. ಅದನ್ನು ಕೆಡಿಸಲು ಯತ್ನಿಸುತ್ತಿರುವವನು ನೀನು. ಆದಾಗ್ಯೂ ಕೆಡದಂತೆ ಕಾಯುವವನೂ ನೀನೇ. ನೀನಿರಲು ನನಗೇನು ಭಯ ? ಪರೀಕ್ಷಿಸು. ನಿನ್ನ ಪರೀಕ್ಷೆಯಲ್ಲಿ ಉತ್ತೀರ್ಣನಾಗದಿದ್ದರೆ ನಿನ್ನ ಭಕ್ತನು ಹೇಗಾದೇನು? ಇರಲಿ. ಹರಕೆಯಂತೆ ಮುಂಡೆಯನ್ನೊಪ್ಪಿಸಲು ಕ್ಷೌರಕನನ್ನು ಹುಡುಕುವೆನು. (ಹೋಗುವನು)

(ಹಜಾಮರ ಗೂಳೆಪ್ಪ ಪ್ರವೇಶಿಸಿ)

ಗೂಳೆಪ್ಪ :— ಏನನ್ಯಾಯದ ಕಾಲಬಂತು. ಒಂದು ಗಂಟೆ ಹೊತ್ತು ಕಷ್ಟಪಟ್ಟು ಕೆಲಸಮಾಡಿದರೆ ಆರೇ ಕಾಸೇನೆ ಕೂಲಿ ? ಒಂದಾಣೆಯಾದರೂ ಬೇಡವೇ ? ಸ್ವಲ್ಪ ಲೆಕ್ಕ ಹಾಕಿ ನೋಡೋಣ. ಹಡಪ ಹೊತ್ತದ್ದಕ್ಕೊಂದು ಕಾಸು. ಕರೆದಲ್ಲಿಗೆ ಹೋದದ್ದಕ್ಕೊಂದು ಕಾಸು. ಕೆಳಗೆ ಹಾಕಿಕೊಳ್ಳುವ ಗೋಣಿ ತಟ್ಟಿಗೆ ಒಂದು ಕಾಸು. ಆಯುಧಗಳಿಗೆ ಬಟ್ಟೆಲಿಗೊಂದು ಕಾಸು, ಮಸೆಯುವ ಕಲ್ಲಿಗೊಂದು ಕಾಸು. ಕನ್ನಡಿಗೊಂದು ಕಾಸು. ನೀರು ಹಚ್ಚಿದ್ದಕ್ಕೊಂದು ಕಾಸು. ಕ್ಷೌರಕ್ಕೆ ತಲೆಗೊಂದು ಕಾಸು. ಗಡ್ಡಕೊಂದು ಕಾಸು. ಮೀಸೆಗೆ? ಮೀಸೆಗೆ ಮರ್‍ಯಾದೆ ಕೊಡಬೇಕು. ಆದ್ದರಿಂದ ಎರಡು ಕಾಸು. ಎರಡು ಕಂಕಳಿಗೂ ಎರಡು ಕಾಸು. ಕತ್ತರಿ, ಚಿಮಟ, ಉಗುರು ಕಡ್ಡಿಗಳಿಗೊಂದೊಂದು ಕಾಸು, ಉದುರಿದ ಕೂದಲು ಬಳಿದದ್ದಕೊಂದು ಕಾಸು. ಇಷ್ಟೆಲ್ಲಾ ಕಷ್ಟಪಡತಕ್ಕ ನನಗೋ ? ನನಗೆ ಮಾಮೂಲಿನಂತೆ ಆರೇಕಾಸೇ ಸಾಕು. ಹೀಗೆ ನನ್ನ ಆಯುಧಗಳಿಗೂ ನನಗೂ ನನ್ನ ಕಷ್ಟಕ್ಕೂ ನ್ಯಾಯವಾದ ಧರ್ಮವಾದ ಅತ್ಯಲ್ಪವಾದ ಕೂಲಿಯನ್ನು ಕೊಟ್ಟಾಗ್ಯೂ ಎರಡಾಣೆಗಳಾಗುತ್ತದೆಯಲ್ಲಾ. ಅಂಥಾದ್ದರಲ್ಲಿ ತಲೆಗೆ ಅರ್ಧಾಣೆ ಕೊಟ್ಟುಬಿಟ್ಟರೆ ನಮ್ಮಂಥಾ ಬಡವರು ಜಾಳುವೆ ಮಾಡುವುದು ಹೇಗೆ ಎಂಬ ಯೋಚನೆಯೇ ಜನಗಳಿಗೆ ತೋರುವುದಿಲ್ಲ. ಏನುಮಾಡುವುದು? ನಾನೊಬ್ಬನೇ ಆಗಿದ್ದರೆ ಜನಗಳನ್ನೆಲ್ಲಾ ನನ್ನ ವಜ್ರಮುಷ್ಟಿಯಲ್ಲಿ ಹಿಡಿದು ಅಲ್ಲಾಡಿಸಿಬಿಡುತ್ತಿದ್ದೆ. ಗರಂ ಗುರುಂ ಎಂದರೆ ಕ್ಷೌರವನ್ನೇ ಮಾಡುತ್ತಿರಲಿಲ್ಲ. ಆದರೆ ಯತ್ನವಿಲ್ಲ. ಈಚೆಗೆ ಈ ತೆಲುಗು ಕಸಬುದಾರರು ಹೆಚ್ಚಿ ನಮ್ಮನ್ನು ಕೇಳುವವರೇ ಇಲ್ಲವಾಗಿದೆ. ಹಳೇ ಸಂಪ್ರದಾಯಸ್ಥರಾರಾದರೂ ಮುಡಿ ಒಪ್ಪಿಸುವುದಕ್ಕೆ ಬಂದರೆ ಆಗಲೇನಾದರೂ ನಾಲ್ಕು ಕಾಸು ಸಿಕ್ಕಬೇಕು. ಯಾರಾದರೂ ಸಿಕ್ಕುತ್ತಾರೋ ಏನೋ ನೋಡೋಣ.

ಮಾರ :—(ಪ್ರವೇಶಿಸಿ) ಅಯ್ಯಾ ನೀನಾರು ? ನನಗೊಬ್ಬ ಶಿವಭಕ್ತನಾದ ಕ್ಷೌರಕ ಬೇಕು.! ಮಲ್ಲಿಕಾರ್ಜುನ ಸ್ವಾಮಿಗೆ ಮುಡಿ ಒಪ್ಪಿಸಬೇಕಾಗಿದೆ. ಎಲ್ಲಿಯಾದರೂ ಸಿಕ್ಕುತ್ತಾರೇನು ?

ಗೂಳೆಪ್ಪ :— ನಾನೂ ಶಿವಭಕ್ತ. ಮಾಡೋದು ಅದೇ ಕಸುಬೇ. ಆದರ ಇಲ್ಲಿ ಮುಡಿ ಒಪ್ಪಿಸಬೇಕಾದರೆ ದರ ಹೆಚ್ಚಿಗೆ ಆಗುತ್ತೆ.

ಮಾರ :—ಎಷ್ಟಾಗುತ್ತಯ್ಯಾ. ನಿಜವಾಗಿ ಹೇಳು. ಸುಳ್ಳು ಹೇಳಬೇಡ.

ಗೂಳೆಪ್ಪ :—ಸುಳ್ಳು ಅನ್ನೋದು ಹ್ಯಾಂಗಿರುತ್ತಪಯ್ಯಾ. ಮುಡಿಗೆಂಟಾಣೆ. ಇಲ್ಲಾಗಲೇ ದರ ನಿಚಾಲ್ಲಾಗಿದೆ.

ಮಾರ :—ಅದೇಕಯ್ಯಾ' ಅಷ್ಟು ಹೆಚ್ಚಿಸಿಬಿಟ್ಟೆ.

ಗೂಳೆಪ್ಪ :—ಏನು ಮಾಡನ್ರಪ್ಪಯ್ಯಾ. ನಿಮ್ಮಂಥಾ ಪುಣ್ಯಾತ್ಮರು ಕೊಡದೆ ಇದ್ರೆ ನಮಂಥಾ ಬಡವರ ಹೊಟ್ಟೆಗತಿ ಏನು ?

ಮಾರ :—ನಿಜ ನಿಜ! ಪಾಪ! ನಿಮ್ಮಂಥವರ ಹೊಟ್ಟೆತುಂಬಬೇಕಾದರೆ ನನ್ನಂಥವರೇ ಕೊಡಬೇಕು. ಆದರೆ ನನ್ನದೊಂದು ನಿಬಂಧನೆ ಇದೆ.

ಗೂಳೆಪ್ಪ :—ಏನು ನಿಬಂಧನೆ ಹೇಳ್ರಿ, ಕೇಳೋನ.

ಮಾರ —ಸರಿಯಾಗಿ ಒಂದು ದೊಂಬರಗಡೆಯ ಎತ್ತರದ ಮೇಲಿರುವ ಒಂಟಿ ಗುಂಡಿನ ಮೇಲೆ ಏಣಿಯ ಸಹಾಯದಿಂದ ಹತ್ತಿ, ಅಲ್ಲಿ ಕುಳಿತು ಮುಡಿ ಒಪ್ಪಿಸಬೇಕು. ಅದು ನಿರ್ಜನಪ್ರದೇಶವೂ ಆಗಿರಬೇಕು.

ಗೂಳೆಪ್ಪ :—ಅಯ್ಯಯ್ಯಪ್ಪಾ' ಇದು ಯಾರಿಂದಾದೀತು. ಗುಂಡ್ಹತ್ತಿ ಗುಂಡಿಳಿಯೊಂದು, ನಮ್ಮಪ್ಪಾ. ನನ್ನಿಂದಂತೂ ಇದಾಗೋದಿಲ್ಲ. ಬ್ಯಾರೆ ಇನ್ಯಾರನ್ನಾದರೂ ನೋಡಿಕೊಂಬೋದೇ.

ಮಾರ :—ಮತ್ತೆ ಯಾರಾದರೂ ಶಿವಭಕ್ತ ಹಜಾಮರು ಇಲ್ಲಿ ಸಿಕ್ಕುತ್ತಾರೇನು ?

ಗೂಳೆಪ್ಪ :—ಇನ್ಯಾರೂ ಇಲ್ಲಕಣಪ್ಪಾ. ಇದ್ದರೂ ಇಷ್ಟೊತ್ತಿನಮ್ಯಾಲೆ ಯಾರೂ ಬರೋದಿಲ್ಲ. ಆಗಲೇ ಊಟಮಾಡಿಬಿಟ್ಟಿದಾರೆ.

**ಮಾರ** :— ಹಾಗಾದರೇನು ಮಾಡಬೇಕು ?

**ಗೂಳಿಪ್ಪ** .— ಇದ್ದೋರಿಗೇ ಕೇಳಿದಷ್ಟು ಕೊಟ್ಟು ಅವರ ಕಾಲ ಕಟ್ಟಿಕೋಬೇಕು. ಇಲ್ಲದಿದ್ದರೆ ಬಂದದಾರೀ ಹಿಡಿದುಕೊಂಡು ಸುಮ್ಮನೆ ಹೋಗಬೇಕು.

**ಮಾರ** :— ನ್ಯಾಯವೇ ಸರಿ. ನೀನೇನು ಹೇಳುತ್ತಿ ?

**ಗೂಳಿಪ್ಪ** :— ಹೇಳೋದೂ ಇಲ್ಲ ಕೇಳೋದೂ ಇಲ್ಲ. ಎರಡು ರೂಪಾಯಿ ಕೊಟ್ಟರೆ ನಿಮ್ಮಂತೇನೇ ಆಗಲಿ. ಇನ್ನೊಂಟಾಣೆ ಜಾಸ್ತಿ ಕೊಟ್ಟರೆ ಏಣೇನೂ ನಾನೇ ತರ್ತೀನಿ. ಪಾಪ! ಪರಸ್ಥಳದಾಗೆ ನೀನ್ಯಾರನ್ನ ಕೇಳ್ತೀಯ.

**ಮಾರ** :—(ಸ್ವಗತ) ಇವನು ಪೂರಾ ಮೋಸಗಾರ. ಆಗಲಿ (ಪ್ರಕಾಶಂ) ಅಯ್ಯಾ, ನಿನ್ನ ಹೆಸರೇನು ?

**ಗೂಳಿಪ್ಪ** :— ನನ್ನ ಹೆಸರು ಗೂಳಿಯ್ಯ ಕಣ್ರಿ.

**ಮಾರ** :— ಗೂಳಿಯ್ಯ, ನೀನು ದೊಡ್ಡ ಸಂಸಾರಿಯಾಗಿ ಕಾಣಿಸುತ್ತೀಯೆ. ನಿನ್ನ ಕೆಲಸಕ್ಕೆ ಹತ್ತು ರೂಪಾಯಿಗಳನ್ನಾದರೂ ಕೊಡಬಹುದು. ಆದಾಗ್ಯೂ ನೀನು ಎರಡೇ ರೂಪಾಯಿಗಳಿಗೆ ಒಪ್ಪಿಕೊಂಡದ್ದನ್ನು ನೋಡಿದರೆ ನಿನ್ನ ಉದಾರ ಬುದ್ಧಿಗಾಗಿ ತುಂಬಾ ಸಂತೋಷವಾಗುತ್ತದೆ. ನಿನ್ನಂಥಾ ಉಪಕಾರಿಯನ್ನು ನಾನು ಇದುವರೆಗೂ ನೋಡಲಿಲ್ಲ. ನಡೆ ಬೇಗ ಹೋಗಿ ಏಣಿಯನ್ನು ತೆಗೆದುಕೊಂಡು ಬಾ. ಹೋಗೋಣ. ಬಹಳ ಹೊತ್ತಾಯಿತು.

**ಗೂಳಿಪ್ಪ** :— ಆಗಲಿ. ನೀವು ಮುಂದೆ ನಡೀರಿ. ನಾನು ಏಣಿ ತಕೊಂಡು ಈಗ ಬಂದುಬಿಟ್ಟೆ.

**ಮಾರ** :— ಹಾಗೆಯೇ ಆಗಲಿ. ಸಾವಕಾಶಮಾಡಬೇಡ. (ಹೋಗುವನು)

**ಗೂಳಿಪ್ಪ** .— ಬ್ಯಾಟೆಯೇನೋ ಒಳಗೆ ಬಿತ್ತು. ಹತ್ತುರೂಪಾಯಿಗಳಾದರೂ ಕೊಡಬಹುದೂಂತ ಅಂದಿದಾನೆ. ಬಾಯಲ್ಲಂದದ್ದು ಬೆನ್ನಿಗೆ ಮೂಲ. ಇವರ ಹತ್ತಿರ ಅಷ್ಟೂ ವಸೂಲು ಮಾಡೇಬಿಡ್ತೀನಿ. ಈಗ ಅವನಿಗೆ ನನ್ನ ಬಿಟ್ಟರೆ ಗತಿಯಿಲ್ಲ. ನನ್ನ ಅನುಸರಿಸಲೇಬೇಕು. ಇಂಥಾ ಏಟಿನಾಗೆ ನಾನು ದುಡ್ಡು ಸಂಪಾದನೆ ಮಾಡಿಕೊಳ್ಳದೆ ಬಿಟ್ರೆ ನನ್ನ ಯಾರಾದರೂ ಮುಠ್ಠಾಳ ಅಂದಾರು. ಆಗಲಿ, ಈಗ್ಯಾಕೆ ಮಾತಾಡಬೇಕು. ಗುಂಡು ಹತ್ತಿದ ಮೇಲಿನ್ನೇ ನನ್ನ ಬುದ್ಧಿವಂತಿಗೆ ಗೊತ್ತಾಗೋದು. ಹೋಗೋಣ ಹೊತ್ತಾಯಿತು. ಪಾಪ! ನನ್ನ ಗಿರಾಕಿ ಕಾದುಕೊಂಡು ಕಣ್ಣು ಕಣ್ಣು ಬಿಡ್ತಾ ಕೂತಿದಾನೋ ಏನೋ (ಹೋಗುವನು)

## ೪ನೇ ಪ್ರವೇಶ

(ಅಡವಿಯಲ್ಲಿ ಗುಂಡಿನಮೇಲೆ ಕ್ಷೌರಾನಂತರದಲ್ಲಿ)

**ಗೂಳಿಪ್ಪ** — ಅಪ್ಪಯ್ಯಾ, ಕೆಲಸವೆಲ್ಲಾ ಮುಗೀತು. ಎಲ್ಲಿ, ನನ್ನ ದುಡ್ಡು ಬಿಚ್ಚಿರಿ.

**ಮಾರ** .— ಗೂಳಿಯ್ಯಾ, ಈ ದಿನ ನೀನು ತುಂಬಾ ಕಷ್ಟಪಟ್ಟಿದ್ದೀಯೆ. ನಿನಗೇನು ಕೊಡಲಿ. ಹೇಳು.

**ಗೂಳಿಪ್ಪ** — ನೀನೆ ಹೇಳಿದೆ. ಹತ್ತು ರೂಪಾಯಿಕೊಟ್ಟರೂ ಸಾಲದೂ ಅಂತ. ಏನೋ ಪಾಪ! ನೀನೂ ಪರಸ್ಥಳ ಬಂದೀದೀಯ. ನಿನ್ನ ಯಾಕ ಸತಾಯಿಸಬೇಕು. ನೀನು ಹೇಳಿದ್ದು ಹತ್ತು ರೂಪಾಯಿ. ಏಣೀದು ಎಂಟಾಣೆ. ನನಗೆಂಟಾಣಿ. ಅಷ್ಟುಮಾತ್ರ ಕೊಟ್ಟರೆ ಸಾಕು ಪಾಪ! ಹೆಚ್ಚಿಗೆ ನಾನ್ಯಾಕೆ ಕೇಳಲಿ.

**ಮಾರ** — ಏನಯ್ಯಾ! ಒಂದು ಸಾರೆ ಕ್ಷೌರಕ್ಕೆ ಹನ್ನೊಂದು ರೂಪಾಯಿಗಳನ್ನು ಕೊಡುವುದಲ್ಲಿಯಾದರೂ ಉಂಟೆ? ಎರಡು ರೂಪಾಯಿಗಳಿಗೆ ಮೊದಲು ಒಪ್ಪಿಕೊಂಡು ಈಗ ಈ ರೀತಿ ಹೆಚ್ಚಿಗೆ ಕೇಳುವುದು ಎಲ್ಲಿಯ ನ್ಯಾಯ. ನಿನ್ನ ಆಶೆಗೆ ಕೊನೆಮೊದಲೇ ಇಲ್ಲವಲ್ಲಾ.

**ಗೂಳಿಪ್ಪ** — ನೀನೊಳ್ಳೇ ದೊಡ್ಡ ಮನುಷ್ಯ ಕಣಯ್ಯ. ಏನಾದರೂ ಆಗಲಿ ಮೊದಲು ಕೊಡಬಹುದೂಂತ ನೀನೇ ಹೇಳಿ ಈಗ ಕೆಲಸವೆಲ್ಲಾ ಮುಗಿದಮ್ಯಾಲೆ 'ಹೊಳೆ ದಾಟಿದ ಮೇಲೆ ಅಂಬಿಗನ ಮಿಂಡ' ಅಂದ್ಹಂಗೆ ಎತ್ತಿಹಾಕೋ ಮಾತಾಡ್ತೀಯಲ್ಲಾ. ಇದೆಲ್ಲಾ ನನ್ನ ಹತ್ತರ ನಡಿಯೋದಿಲ್ಲ. ನೀನು ದೊಡ್ಡ ಮನುಷ್ಯನಾದರೆ ನನಗೇನೂ ಭಯವಿಲ್ಲ. ಮಾತಿನಂತೆ ರೂಪಾಯಿಗಳು ಕೊಟ್ಟೇ ಬಿಡಬೇಕು. ಇಲ್ದಿದ್ರೆ ನಿನ್ನ ಮರ್ಯಾದೆ ಕಳ್ದ್ಬಿಟ್ಟೀನು.

**ಮಾರ** .—(ಶಾಂತತೆಯಿಂದ) ಅಯ್ಯಾ, ಕೋಪಮಾಡಬೇಡ. ಕಷ್ಟಪಟ್ಟು ಕೆಲಸಮಾಡಿರುವ ನೀನು ಎಷ್ಟು ರೂಪಾಯಿಗಳನ್ನು ಕೇಳಿದರೂ ತಪ್ಪಿಲ್ಲ. ಅಲ್ಲದೆ ಶ್ರೀಮಂತನಾದ ನನಗೆ ಎರಡು ರೂಪಾಯಿಗಳನ್ನು ಕೊಡುವುದು ಎಷ್ಟು ಸುಲಭವೋ ಹನ್ನೊಂದು ರೂಪಾಯಿಗಳನ್ನು ಕೊಡುವುದೂ ಅಷ್ಟೇ ಸುಲಭ. ಆದರೆ ಕ್ಷೌರಕ್ಕೆ ಕುಳಿತಿರುವವನ ಹತ್ತಿರ ಹಣವೆಲ್ಲಿರುತ್ತೆ. ಅದು ನನ್ನ ಬುತ್ತಿಯ ಹಸಿಬಿಯಲ್ಲಿದೆ. ಕೆಳಕ್ಕೆ ಇಳಿದುಹೋಗಿ ನಂತರ ಕೊಡುವ ತೆಗೆದುಕೊಳ್ಳುವ ವಿಚಾರ ಯೋಚಿಸೋಣ. ನಾನು ಇಳಿಯುವವರೆಗೂ ಸ್ವಲ್ಪ ತಾಳು. ನಿಚ್ಚಣಿಕೆಯ ಕಾಲು ಬಿಗಿಯಾಗಿಲ್ಲ. ಒಂದೇಸಾರಿ ಇಬ್ಬರೂ ಇಳಿದರೆ ಮುರಿಯಬಹುದು. ನಾನು ಇಳಿದನಂತರ ನೀನು ಇಳಿಯುವೆಯಂತೆ.

**ಗೂಳಿಪ್ಪ** :— (ಸಂತೋಷದಿಂದ) ಹಂಗೇ ಆಗಲಿ. ಇಳಿಯಪ್ಪಾ, ಹುಷಾರಾಗಿರು. ಬಹಳ ಎತ್ತರ. ಕೆಳಗೆ ನೋಡ

ಬ್ಯಾಡ. ಕಣ್ಣು ತಿರುಗತಾನೆ. ಎಲ್ಲಾರೂ ಕಾಲು ಜಾರೀತು.

ಮಾರ.—ಹಾಗೆಯೇ ಆಗಲಿ. ಮೇಲೆ ಭದ್ರವಾಗಿ ಹಿಡಿದು ಕೊಂಡಿರು. (ಇಳಿಯುವನು)

ಗೂಳಪ್ಪ.—(ಮೇಲಿನಿಂದ) ಇಳಿದೇನಪ್ಪೋ.

ಮಾರ.—ಹೂಂ. ಕಣಪ್ಪೋ. (ಏಣಿಯನ್ನು ತಟ್ಟನೆ ತೆಗೆಯುವನು)

ಗೂಳಪ್ಪ—ಏಣಿ ಯಾಕೆ ತೆಗೆದಯ್ಯಾ. ನಾನಿಳಿಯೋದು ಹೆಂಗೆ?

ಮಾರ.—ನೀನು ಇಳಿಯಬೇಕಾದ ಅವಶ್ಯಕವೇ ಇಲ್ಲ. ಅಲ್ಲಿಯೇ ಇರು. ಇನ್ನೂ ಅನೇಕರಿಗೆ ಕ್ಷೌರಮಾಡಿ ತಲೆಯೊಂದಕ್ಕೆ ಹನ್ನೊಂದು ರೂಪಾಯಿಗಳಂತೆ ತೆಗೆದುಕೊಂಡು ಭಾರಿ ಐಶ್ವರ್ಯವಂತನಾಗಿಬಾ. ಗುಂಡಿನ ಮೇಲಾದರ ವಿಶೇಷವಾಗಿ ಹಣಬರುತ್ತೆ. ಕೆಳಗೆ ಇಲ್ಲೇನದೆ?

ಗೂಳಪ್ಪ—ಬಲು ದೊಡ್ಡ ಮನುಷ್ಯ ಕಣಯ್ಯಾ. ಮರ್ಯಾದೆಯಿಂದ ಏಣಿ ಹಾಕಿ ನನ್ನ ಕೆಳಗಿಳಿಸಿ ದುಡ್ಡುಕೊಟ್ಟು ಹೋಗುತೀಯಾ, ಇಲ್ಲವೇ ನಿನಗೆ ತಕ್ಕದ್ದು ಮಾಡಬೇಕೋ?

ಮಾರ—ಯಾಕಯ್ಯಾ, ಗೂಳಪ್ಪ. ಬಹು ಕಠಿಣವಾಗಿ ಮಾತನಾಡುತ್ತಿದ್ದೀಯೆ. ನಿನಗೆ ನಾನು ಯಾವ ದುಡ್ಡನ್ನು ಕೊಡಬೇಕು.

ಗೂಳಪ್ಪ—ಬೇಸ್! ಯಾವ ದುಡ್ಡು! ಕ್ಷೌರಮಾಡಿಸಿಕೊಂಡದ್ದಕ್ಕೆ ಕೊಟ್ಟೀಯೋ ಕೊಡಲಾರೆಯೊ? ಯಾವ ದುಡ್ಡಂತೆ, ಕೊಡ್ಹೋಗಲೇ ಗಂಟುಕಳ್ಳ!

ಮಾರ.—ಯಾವ ಗಂಟಯ್ಯಾ, ನಿನ್ನ ತಂದೆಯೇನಾದರೂ ನನ್ನ ತಂದೆಗೆ ಸಾಲವಾಗಿ ಕೊಟ್ಟಿದ್ದನೆ? ಅಥವಾ ನೀನೇನಾದರೂ ನನಗೆ ಕೊಟ್ಟಿದ್ದೀಯಾ? ನಿನ್ನ ಯಾವ ಗಂಟನ್ನೂ ನಾನು ಕದಿಯಲಿಲ್ಲವಲ್ಲಾ. ಮಾತುಗಳಲ್ಲಿ ಮರ್ಯಾದೆಯೇ ಬೇಡವೆ? ಆಗಲಿ, ನಿನ್ನಂತಹ ಸಂಪನ್ನ ಗೃಹಸ್ಥನೊಂದಿಗೆ ಗಂಟುಕಳ್ಳನಾದ ನನಗೇನು ಕೆಲಸ. ನನ್ನ ಪಾಡಿಗೆ ನಾನು ಹೋಗುತ್ತೇನೆ.

ಗೂಳಪ್ಪ:—(ಸ್ವಗತ) ಇದೊಳ್ಳೇ ಗ್ರಹಚಾರ ಬಂತೇ. ಈ ಹಾಳು ಶನಿ ನನಗಿಲ್ಲಿ ಗಂಟುಬಿದ್ದನಪ್ಪಾ. ಎಲ್ಲೋ ಗೊಂಡಾರಣ್ಯಕ್ಕೆ ಕರಕೊಂಡು ಬಂದು ಎಂಟಾಳೆತ್ತರದ ಗುಂಡ್ಹತ್ತಿಸಿ ಏಣೀ ತಕ್ಕೊಂಡು ಹೋಗ್ತಾ ಇದಾನೆ. ಇವನ ಮನೆ ಹಾಳಾಗ. ಏನಾದರೂ ಅಂದೇನೇ ಏಣೀ ತಗೊಂಡು ಹಂಗೇ ಹೊರಟುಹೋಗಿಬಿಟ್ರೆ ನಾನು ಇಳಿಯೋ ಗತಿ ಏನು? ಈಗ ನಾನೇ ಇವನ್ನ ಅನುಸರಿಸಬೇಕಾಯ್ತೇ. ಏನೋ ಬಡವ ನಾಲ್ಕು ಕಾಸು ಸಿಕ್ಕೀತಲ್ಲಾ ಅಂತ ಆಶೆಪಟ್ರೆ ಈ ಗತಿಯಾದ್ರೆ ಏನು ಮಾಯಲಿ. ಆಗಲಿ ಮತ್ತೆ. ಏನುಮಾಡೋದು. ಹೊತ್ತು ಬಂದ್ಹಂಗೆ ಕೊಡೆ ಹಿಡೀಬೇಕು. ಉಪಾಯಮಾಡಿ ಏಣೀ ಹಾಕಿಸಿ ಕೆಳಗಿಳದು ಆಮ್ಯಾಲೆ ಇವನಿಗೆ ತಕ್ಕದ್ದು ಮಾಡ್ತೀನಿ. (ಪ್ರಕಾಶ) ಅಪ್ಪಾ, ಸಾಹುಕಾರ, ನಾನಂದಿದ್ದಕ್ಕೆ ಸಿಟ್ಮಾಡಿಕೋಬ್ಯಾಡ. ದಯಮಾಡಿ ಏಣಿಹಾಕಿ ನನ್ನ ಕೆಳಗಿಳಿಸಿ ನಿನ್ಮನಸ್ಸಿಗೆ ಬಂದಷ್ಟು ದುಡ್ಡು ಕೊಟ್ಹೋಗಪ್ಪಾ. ನಾನು ಯಾವಾಗ್ಲೂ ಸ್ವಲ್ಪ ಮುಂಜೋರಿ ಮನುಷ್ಯ.

ಮಾರ.—ನಾನೂ ಸಹ ಸ್ವಲ್ಪಮಟ್ಟಿಗೆ ಹಾಗೆಯೇ, ಇರಲಿ. ಈ ದಿನ ನೀನು ನನಗೆ ತುಂಬಾ ಉಪಕಾರಮಾಡಿದ್ದೀಯೆ. ನಾನು ಅದನ್ನು ಎಂದಿಗೂ ಮರೆಯಲಾರೆ. ನೀನಾಡಿದ ಮಾತಿಗೆ ನಾನು ಬೆಲೆ ಕೊಡಲೇಬೇಕು. ನೀನು ನನ್ನನ್ನು ಗಂಟುಕಳ್ಳನೆಂದು ಕರೆದಿದ್ದೀಯೆ. ನಿನಗೆ ಹಣವನ್ನು ಕೊಟ್ಟರೆ ನಾನು ಗಂಟುಕಳ್ಳನಾಗುವುದಿಲ್ಲ. ನಿನ್ನ ಮಾತು ಹುಸಿಯಾಗುತ್ತದೆ. ಹಾಗಾಗಬಾರದು. ಹಜಾಮರು ಬಲು ಸತ್ಯವಂತರಯ್ಯಾ. ಅದರಲ್ಲಿಯೂ ನಿನ್ನ ವಿಷಯವಂತೂ ಕೇಳಬೇಕಾಗಿಯೇ ಇಲ್ಲ. ಆದ್ದರಿಂದ ಸರ್ವಪ್ರಯತ್ನದಿಂದಲೂ ನಾನು ನಿನ್ನ ಮಾತನ್ನು ಉಳಿಸಬೇಕಾದ್ದೇ ಧರ್ಮ. ನಿನ್ನ ಮಾತಿಗಿಂತಲೂ ನನಗೆ ಹಣವೇನು ದೊಡ್ಡದಲ್ಲ. ಪ್ರಯುಕ್ತ ನೀನು ದಶರಥರಾಯನಂಥ ಸತ್ಯವಾದಿಯೆಂದು ತೋರಿರುವುದಕ್ಕಾಗಿ ನಾನು ನಿನಗೆ ಹಣವನ್ನು ಕೊಡುವುದಿಲ್ಲ. ಕೊಡಬಹುದೇ ಹೇಗೆ? ನೀನೇ ಹೇಳು.

ಗೂಳಪ್ಪ.—(ಸ್ವಗತ) ಕೊಟ್ಟ ಕಣಯ್ಯ ಬತ್ತೀನ! ನನಗೇನೇ ದುಡ್ಡಿಗೆ ಟೋಪಿ ಹಾಕಿದ. ಇವನೂ ಒಳ್ಳೇ ಪಕ್ಕಾ ಜಾಣ. ನನ್ನ ಎಂಥಾ ಇಕ್ಕಟ್ಟಿಗ ಸಿಗಿಸ್ಬಿಟ್ಟ. ಉಸಿರು ಬಿಡತಕ್ಕಿಲ್ಲ. ಅವನು ಹೇಳಿದ್ದಕ್ಕೆಲ್ಲಾ ಬಾಯಿ ಮುಚ್ಚಿಗೊಂಡು ಒಪ್ಪಿಕೋಬೇಕು. ಇಲ್ದೇ ಇದ್ರೆ ಏಣೀ ತಕೊಂಡು ಹೋಗಿಬಿಡ್ತಾನೆ. ನಾನು ಅನ್ನಾ ನೀರೂ ಇಲ್ದೆ ಅತ್ತ್ರತ್ತು ಅಡವೀ ಹೆಣವಾಗ್ತೀನಿ. ಅಯ್ಯೋ ಶಿವನೆ, ಇವತ್ತು ಬೆಳಿಗ್ಗೆ ಎದ್ದು ಯಾವ ಪುಣ್ಯಪುರುಷನ ಮುಖಾ ನೋಡಿದೆನೋ ಏನೋ, ನನಗಿಂಥಾ ದುರವಸ್ಥೆ ಬಂತು. ಆಯಿತು. ದುಡ್ಡೆಲ್ಲ್ಯಾದರೂ ಹಾಳಾಗಿ ಹೋಗಲಿ. ಜೀವವೊಂದುಳಿದರೆ ಸಾಕು. (ಪ್ರಕಾಶ) ಅಪ್ಪಾ ಪುಣ್ಯಪುರುಷ. ನೀನು ದುಡ್ಡು ಕೊಡಬೇಡ. ಏಣಿಹಾಕಿ ನನ್ನ ಕೆಳಕ್ಕಿಳಿಸಿ ಪ್ರಾಣದಾನಮಾಡು ಮಹಾರಾಯಾ, ನಿನ್ನ ಕಾಲಿಗೆ ಬೀಳ್ತೀನಿ.

ಮಾರ:—ಗುಂಡಿನಮೇಲಿರುವವರೆಗೂ ಏನು ಬೇಕಾದರೂ ಹೇಳುವೆ. ಕೆಳಗಿಳಿದನಂತರ ಹಣಕ್ಕಾಗಿ ನನ್ನನ್ನು ಪೀಡಿಸಿದರೆ ಮಾಡುವದೇನು ? ನೀನು ನಂಬುಗೆಗೆ ಶುದ್ಧವಾಗಿಯೂ ಅನರ್ಹನಾದ ಮನುಷ್ಯ.

ಗೂಳಿಪ್ಪ:—ಕೇಳೋದಿಲ್ಲರೀ, ಖಂಡಿತವಾಗಿಯೂ ಕೇಳೋದಿಲ್ಲ.

ಮಾರ:—ಹಾಗೆಂದು ಮಲ್ಲಿಕಾರ್ಜುನ ಪ್ರಭುವಿನಮೇಲೆ ಆಣೆಯಿಟ್ಟು ಪ್ರಮಾಣಮಾಡು

ಗೂಳಪ್ಪ.—ಮಲ್ಲಿಕಾರ್ಜುನನಾಣೆಗೂ ಭ್ರಮರಮ್ಮನವರಾಣೆಗೂ ಮೂರು ಮೂರು ಬಾರಿಗೂ ನಿಮ್ಮನ್ನು ಯಾವ ರೀತಿಯಿಂದಲೂ ದುಡ್ಡು ಕೇಳೋದಿಲ್ಲ. ಇನ್ನೇನ್ರಿ ಒಪ್ಪಿಕೊಂಡ್ರಾ

ಮಾರ:—ಸರಿ, ಸಂತೋಷವಾಯಿತು. ಆದರೆ ಈ ವಿಷಯವನ್ನು ಮತ್ತೆ ಯಾರಲ್ಲಿಯೂ ಪ್ರಸ್ತಾಪಿಸುವುದಿಲ್ಲವಷ್ಟೆ?

ಗೂಳಪ್ಪ.—ಏನಂತ ನಾಚಿಗ್ಗೆಟ್ಟು ಹೇಳಿಕೋಬೇಕ್ರಿ. ಕೇಳಿದ್ರೆ ಯಾರಾದ್ರೂ ನನ್ನೇ ನೋಡಿ ನಗ್ತಾರೆ.

ಮಾರ—ಹಾಗಾದರೆ ಬದುಕಿಕೋ. ಇಳಿದು ಹೊರಟು ಹೋಗು. (ಏಣಿಯನ್ನು ಹಾಕಿ ಹೋಗುವನು)

ಗೂಳಪ್ಪ—(ಇಳಿದು ಬಂದು) ಬದುಕ್ಕೊಂ ಅಂತೆ ಬದುಕ್ಕೊ! ನಾನೇ ಬದುಕ್ಕೋಬೇಕು. ಒಳ್ಳೇ ಲಕ್ಷಣವಾಯಿತು. ಅಗ್ಲಿ, ಸದ್ಯ ಮಾರಾಯ ಜೀವಕ್ಕೆ ನಂಚಕಾರ ತಂದಿದ್ದ. ಗೂಳಪ್ಪ ಹೋಗಿ ಗೋಳಪ್ಪ ಆಗಿದ್ದೆ. ಮಲ್ಲಿಕಾರ್ಜುನನ ದಯದಿಂದ ಉಳುಕೊಂಡೆ. ಮುಂದೆಗೆರಡಾಣೆ ದೇವರ ಕಾಣಿಕೆ ಕೊಡಬೇಕು. ಏಣಿಯವನಿಗೆರಡಾಣೆ ಬಾಡಿಗೆ ಬ್ಯಾರೆ ಕೊಡಬೇಕು. ಈ ಮಹಾರಾಯನಿಗೆ ನಾನು ನೀರ್ದುಚ್ಚಿ ತಲೇ ಬೋಳಿಸಿದ್ರೆ ಅವನು ನನಗೆ ನೀರಿಲ್ಲದೇನೆ ಬೋಳಿಸಿದ. ಅದೂ ನ್ಯಾಯವೇ. ಯಾಕೆ ಅಂದ್ರೆ 'ಅತಿ ಆಸೆ ಗತಿಗೇಡು' ಅಂಬೋದೇನೂ ಸುಳ್ಳಲ್ಲ. ರಿವಾಜಿನಂತೆ ಮುಡಿ ಒಂದಕ್ಕೆ ಒಂದು ಹಣ ತಗೊಂಬೋದು ಬಿಟ್ಟು ಹನ್ನೊಂದು ರೂಪಾಯಿಗೆ ನಾನು ಆಸೆ ಪಟ್ಟಿದ್ದಕ್ಕೆ ಈ ಏಳೂ ಹನ್ನೊಂದು ಆಯ್ತು. ಇನ್ನು ಮುಂದಕ್ಕಾದರೂ ಸ್ವಾಮಿ ಕೊಟ್ಟಿದ್ದರಾಗೆ ಸಮಾಧಾನ ಮಾಡಿಕೊಂಡಿರಬೇಕು. ಒಂದು ಪಾವಲಿ ಹೋದರೂ ಹೋಗಲಿ. ಒಳ್ಳೇ ಬುದ್ಧಿ ಕಲ್ತುಕೊಂಡೆ. ಆಗಲಿ, ಎಲ್ಲಾದರೂ ಮೂರುಕಾಸು ಸಿಗುತ್ತೇನೋ ಹೋಗೋಣ. (ಹೋಗುವನು)

## ನಾಲ್ಕನೆಯ ಅಂಕವು

ಮಾರ.—(ಪ್ರವೇಶಿಸಿ) ಶಿವದರ್ಶನ ಮಾಡಿ ಮುಡಿಯನ್ನೊಪ್ಪಿಸಿದ್ದಾಯಿತು. ಸ್ನಾನಮಾಡಿ ಶುಚಿರ್ಭೂತನಾಗಿ ಚಂದ್ರಮೌಳಿಗೆ ನೈವೇದ್ಯ ಸಮರ್ಪಣೆಯನ್ನು ಮಾಡಿದ್ದೂ ಆಯಿತು. ಇನ್ನು ಭೋಜನ ಮಾಡಬೇಕು. ಗ್ರಾಮ ಸಮೀಪದಲ್ಲಿ ಯಾರಾದರೂ ಭಿಕ್ಷುಕರೋ ಜಂಗಮರೋ ಬರಬಹುದು. ನನ್ನ ಮನೆಗೆ ಹೋಗುವ ದಾರಿಯ ಪಕ್ಕದಲ್ಲಿ ಒಂದು ಮೈಲಿಯ ದೂರದಲ್ಲಿ ಒಂದು ಗವಿಯಿದೆ. ಅದಾದರೆ ನಿರ್ಜನ ಪ್ರದೇಶ. ಯಾರೂ ಬರುವ ಸಂಭವವಿಲ್ಲ. ಆದ್ದರಿಂದ ಅಲ್ಲಿಯೇ ನನ್ನ ಕ್ಷುದ್ಬಾಧೆಯನ್ನು ತೀರಿಸಿಕೊಳ್ಳುತ್ತೇನೆ. ಓಹೋ ಆಗಲೇ ಸಾಯಂಕಾಲವಾಗುತ್ತಾ ಬಂತು.

ಭಾಮಿನಿ॥
ಚರಿಸಿ ದೂರದ ಬಟ್ಟೆಯಂ ನೇ ।
ಸರನು ದಣಿವಾರಿಸಲು ಪಶ್ಚಿಮ ।
ಶರಧಿಯಂತಃಪುರದ ಬಳಿಗೈದಿದನು ಧೇನುಗಳು॥
ಕರುಗಳಿಗೆ ಮೊಲೆಯೂಡೆ ವೇಗದಿ ।
ಬರುತಿಹವು ನೆಳಲುಗಳು ದೂರಕೆ ।
ಸರಿದಪಂಚರಗುಡುತೆ ಪಾರ್ವವು ಪಕ್ಕಿ ಕೋಟರಕೆ ॥

ಕಂದ॥ ಸಂದುದು ದಿನಪನತಾಪಂ ।
ಬಂದುದು ಶೀತಲದ ಮಂದ ಸೌರಭ ವಾತಂ ॥
ಸುಂದರಿಯರು ಹರ್ಮ್ಯಾಗ್ರದೀ ।
ಸಿಂದಳ್ಕರದಿಂದೆ ನೋಳ್ಪರಿನಿಯರ ಬರವಂ ॥

ಇನ್ನು ನಾವಕಾಶ ಮಾಡಲಾಗದು. (ಒಳಹೊಕ್ಕು ಮತ್ತೆ ಪ್ರವೇಶಿಸಿ) ಇದೇ ಗವಿ. ಒಳಗೆ ಪ್ರವೇಶಿಸುತ್ತೇನೆ (ಮುಂದ ನೋಡಿ) ಆಹಾ ಎಂತಹ ಪ್ರಕೃತಿ ಸೌಂದರ್ಯ! ಎಂತಹ ಶಾಂತಿ ಸಾಮ್ರಾಜ್ಯ! ಕನ್ನಡಿಯಂತೆ ನಿರ್ಮಲವಾದ ಈ ಕೊಳವೋ! ಈ ನಿರ್ಜನ ಪ್ರದೇಶದಲ್ಲಿ ಯಾವ ಪುಣ್ಯಾತ್ಮರು ಇಂತಹ ಕೊಳವನ್ನು ತೋಡಿಸಿರಬಹುದು. ಅವರೇ ಧನ್ಯರು. ಧರ್ಮ ಪ್ರೇಮಿಗಳಾದ ಅಂತಹ ಮಹಾತ್ಮರ ಜೀವಿಗಳೇ ಸಾರ್ಥಕ. ಅಯ್ಯೋ, ಹೀಗೆಯೇ ಸರಸ್ತಟಾಕಾರಾಮಾದಿಗಳನ್ನು ನಿರ್ಮಿಸಿ ಪ್ರಾಣಿಕೋಟಿಗೆ ಹಿತಂಕರನಾಗಿ ಇಹಪರಗಳೆರಡನ್ನೂ ಸಾರ್ಥಕಗೊಳಿಸಿಕೊಳ್ಳುವುದನ್ನು ಬಿಟ್ಟು ನಾನೆಂತಹ ವ್ರತವನ್ನವಲಂಬಿಸಿದೆನು! ನನಗೇತಕ್ಕಂತಹ ಬುದ್ಧಿ ಹುಟ್ಟಿತು! ಲೋಕದಲ್ಲಿ ಯಾರೂ ಎಂದೂ ಕೇಳಿ ಕಂಡರಿಯದ ವಿಲಕ್ಷಣ ವ್ರತವು ನನ್ನ ಮನಸ್ಸಿಗೇನೆ ಹೇಗೆ ಸ್ಫುರಿಸಿರಬಹುದು. ಜಗತ್ಪ್ರಭು

ಸಾಂಬ, ಎಲ್ಲವೂ ನಿನ್ನ ಲೀಲೆ! ನಡೆನುಡಿಗಳಿಗೆಲ್ಲಾ ನೀನೇ ಪ್ರೇರಕನು. ಮನುಷ್ಯರು ಕೇವಲ ನಿನ್ನ ಕೈ ಗೊಂಬೆಗಳು. ನೀನೊಲಿಯಲು ಕಾರಣವು ವ್ರತಕೋಟಿಯಲ್ಲ. ಅವರಲ್ಲಿ ನಾವಿಡುವ ನಿಷ್ಠೆ. ಅದನ್ನು ಜಗತ್ತಿಗೆ ನಿದರ್ಶನ ಮಾಡಿ ಕೊಡುವುದಕ್ಕಾಗಿಯೇ ನನಗಿಂತಹ ವ್ರತಾಚರಣೆಯನ್ನು ನೀನು ಪ್ರೇರಿಸಿರಬಹುದು. ಮಹಾನುಭಾವ, ನಿನ್ನ ಕೃಪಾ ವಿಶೇಷದಿಂದ ನನಗೆ ಜ್ಞಾನೋದಯವಾಗುತ್ತದೆ. ಶ್ರದ್ಧೆಯಿಂದಲೇ ನೀನೊಲಿಯುವೆ. ಆಗಲಿ ನನ್ನ ವ್ರತವನ್ನೇ ನಾನು ಕಪಿಮುಷ್ಟಿಯಾಗಿ ಹಿಡಿಯುವೆನು. ನಿನ್ನಷ್ಟಕ್ಕೆ ನೀನೇ ನನ್ನಲ್ಲಿ ಅನುಗ್ರಹಿಸುವೆ. ಇರಲಿ, ಹೊತ್ತು ಮುಳುಗುತ್ತಾ ಬಂತು. ಬೇಗ ಭೋಜನ ಮಾಡೋಣ. (ಬುತ್ತಿಯನ್ನು ಬಿಚ್ಚುವನು)

ಈಶ್ವರ :—(ಪ್ರವೇಶಿಸಿ) ಇಕ್ಕದ ಮಾರನೆಂತಹ ವಿಲಕ್ಷಣ ಭಕ್ತ! ಇವನಾಚರಿಸುವ ವ್ರತಕ್ಕೂ ಇವನ ಭಕ್ತಿ ಪೂರ್ಣ ಮನೋವೃತ್ತಿಗೂ ಸಾಮ್ಯವೇ ಇಲ್ಲ. ಉತ್ತರ ದಕ್ಷಿಣ ಧ್ರುವಗಳಷ್ಟು ಪರಸ್ಪರ ಅಂತರವಿದ್ದಾಗ್ಯೂ ಎರಡನ್ನೂ ಚ್ಯುತಿಯಿಲ್ಲದೆ ನಡೆಸುತ್ತಿರುವ ಇವನು ನಿಜವಾಗಿಯೂ ಶ್ರದ್ಧಾಳುವೇ ಸರಿ. ಇಷ್ಟು ದಿನಗಳೂ ಇವನು ಮಾಡಿದ ವ್ರತಾಚರಣೆಯ ರೂಪವಾದ ತಪಸ್ಸಿನಿಂದಲೂ, ನನ್ನಲ್ಲಿಟ್ಟಿರುವ ಅಮೋಘವಾದ ಭಕ್ತಿ ವಿಶೇಷದಿಂದಲೂ, ಇವನ ಜನ್ಮಾಂತರಗಳ ಪಾಪರಾಶಿಯಲ್ಲಿ ಬಹು ಭಾಗವೆಲ್ಲಾ ಕಳೆದು ಹೋಗಿರುವುದು. ಜಾಗ್ರತೆಯಲ್ಲಿಯೇ ಇವನು ಮೋಕ್ಷ ಸಾಮ್ರಾಜ್ಯ ಸಿಂಹಾಸನವನ್ನಧಿರೋಹಿಸಲು ಅರ್ಹನಾಗುವನು. ಇವನ ಭಕ್ತಿಯೇ ನನ್ನನ್ನು ಪ್ರಬಲ ಪಾಶದಂತೆ ಕಟ್ಟಿ ಇವನ ಹಿಂದೆಮುಂದೆ ಸುತ್ತಾಡುವಂತೆ ಮಾಡಿರುವದು. ಆಗಲಿ, ಇವನ ಒಳಗೆ ಹೋಗಿ ಪರೀಕ್ಷಿಸುವೆನು (ಎದುರಿಗೆ ಬಂದು) ಏನಯ್ಯಾ ಮಾರಭಕ್ತ! ಹರಕೆಯನ್ನು ತೀರಿಸಿದ್ದಾಯಿತೇ? ಶ್ರೀಶೈಲದಿಂದ ಯಾವಾಗ ಬಂದೆ? ಇದೇನು ಈಗ ಭೋಜನಕ್ಕೆ ಕುಳಿತುಕೊಳ್ಳುತ್ತಾ ಇದ್ದೀಯೇ ನನ್ನನ್ನು ಮರೆತುಬಿಟ್ಟೆಯಾ? ಬೆಳಗಿನಿಂದಲೂ ಹಸಿದುಕೊಂಡೇ ಇದ್ದೇನಲ್ಲಾ.

ಮಾರ :—(ಸ್ವಗತ) ಇದಿಗೋ, ಜಂಗಮ ವೇಷಧಾರಿಯಾದ ಪರಶಿವನು ಪರೀಕ್ಷೆಗೆ ಬಂದಿರುವನು. ಪ್ರತ್ಯಕ್ಷವಾಗಿ ಪ್ರಭುವೇ ಬಂದಿರಲು ನನಗೆ ವ್ರತಭಂಗದ ಭಯವೇಕೆ? ಆದರೆ ಎಲ್ಲಿಯವರೆಗೆ ಮಹಾದೇವನು ತನ್ನ ದೇವತ್ವವನ್ನು ಮರೆಮಾಚಿ ಮನುಷ್ಯನಂತೆ ನಟಿಸುವನೋ ಅಲ್ಲಿಯವರೆಗೆ ನಾನೂ ಸಹ ಪರಶಿವನೇ ಜಂಗಮವೇಷಧಾರಿಯೆಂಬ ಜ್ಞಾನವನ್ನು ಮುಚ್ಚಿಟ್ಟು ಅಜ್ಞಾನಿಯಾದ ಪ್ರಾಪಂಚಿಕನಂತೆ ನಟಿಸುವೆನು. (ಪ್ರಕಾಶ) ಗುರುವರ್ಯ್ಯಾ, ಶರಣು ಮಾಡುತ್ತೇನೆ. ನನ್ನಿಂದ ನಿಮಗೆ ಈ ದಿನ ಭೋಜನವಿಲ್ಲದಂತಾಯಿತು. ಇದಕ್ಕಾಗಿ ನಾನು ಬೆಳಗಿನಿಂದಲೂ ಎಷ್ಟು ಪರಿತಾಪ ಪಡುತ್ತಿದ್ದೇನೆಯೋ ಹೇಳಿ ಫಲವಿಲ್ಲ. ನಾನು ಮಹಾಪಾಪಿ! ಇಷ್ಟು ಹಸಿವುಗೊಂಡು ಬಂದಿರುವ ನಿಮಗೆ ಈಗಲಾದರೂ ಭೋಜನವಮಾಡಿಸಿ ಧನ್ಯನಾಗೋಣವೆಂದರೆ ಲಭ್ಯವಿಲ್ಲದೆ ಹೋಗಬೇಕೇ; ಶಿವಶಿವಾ!

ಈಶ್ವರ :—ಅದೇಕಯ್ಯಾ ಲಭ್ಯವಿಲ್ಲ. ಮತ್ತೇನು ವಿಘ್ನವನ್ನು ತಂದೊಡ್ಡಿದ?

ಮಾರ :—ಮತ್ತೇನೂ ಇಲ್ಲ. ಮಹಾಪ್ರಭು, ಹೊತ್ತು ಮುಳುಗುವ ಈ ಸಂಧಿಕಾಲದಲ್ಲಿ, ಭೋಜನಮಾಡುವುದು ಶಾಸ್ತ್ರನಿಷಿದ್ಧವೆಂದು ತಮ್ಮಂಥಾ ಮಹನೀಯರಿಂದ ಕೇಳಿದ್ದೇನೆ. ನಮ್ಮಂತಹ ಸಾಮಾನ್ಯರು ಒಂದುವೇಳೆ ಇಂತಹ ಅಕಾಲದಲ್ಲಿ ಯತ್ನವಿಲ್ಲದೆ ಭೋಜನಮಾಡಿ ದೋಷಭಾಗಿಗಳಾದಾಗ್ಯೂ ಮತ್ತೆ ಪಾವನಗೊಳಿಸಲು ಗುರುಗಳಾದ ತಾವಿದ್ದೀರಿ. ತಾವೇ ಮಾಡಬಾರದ್ದನ್ನು ಮಾಡಿ ದೋಷವನ್ನು ಕಟ್ಟಿಕೊಂಡರೆ ಗತಿ ಏನು? ಅದಕ್ಕಾಗಿಯೇ ನಾನು ಪೇಚಾಡುತ್ತಿರುವುದು.

ಈಶ್ವರ :—ಏನಯ್ಯಾ, ಈ ಶಾಸ್ತ್ರವಿಧಿಗಳನ್ನೆಲ್ಲಾ ಬಲ್ಲ ನೀನೇ ಬುತ್ತಿಯನ್ನು ತಿನ್ನಲು ಸಿದ್ಧವಾಗಿರುವೆಯಲ್ಲಾ. ಅದು ಮಾತ್ರ ಆಗಬಹುದೇನೋ? 'ಶಾಸ್ತ್ರ ಹೇಳುವುದಕ್ಕೆ ಬದನೇಕಾಯಿ ತಿನ್ನುವುದಕ್ಕೆ' ಅಲ್ಲವೇ?

ಮಾರ :—ಶಾಂತಂ ಪಾಪಂ—ಎಲ್ಲಿಯಾದರೂ ಉಂಟೆ? ಇಷ್ಟು ಹೊತ್ತಿನಲ್ಲಿ ನಾನು ಊಟಮಾಡುವದೆಂದರೇನು? (ಬುತ್ತಿಯನ್ನು ಕಟ್ಟಿ)

ಕಂದ|| ಬಲುಹಸಿಲೊಳ್ ಬೆಳಗಿಂದಂ |
ಬಳಲ್ದುದು ಪಾಥೇಯುವಂತರಿಂ ಭುಂಜಿಸಲೇಂ ||
ಸಲುವುದೊ ಪಳತುದೊ ನೋಡ |
ಲ್ಕೆಳಸಿದೆನದರಿಂದೆ ಬಿರ್ಚಿದೆಂ ಬಂಧಿಸಿದೆಂ ||

ಇಷ್ಟೇ ಅಲ್ಲದೆ ಊಟಮಾಡುವುದಕ್ಕಾಗಿ ಬಿಚ್ಚಲಿಲ್ಲ.

ಈಶ್ವರ:—ಹಾಗೆಯೇ ಆಗಲಿ. ನನಗೆ ವಾಗ್ದಾನ ಮಾಡಿರುವ ಬೋಜನ ಧಾನ್ಯಗಳಿಗೇನು ಹೇಳುವೆ?

ಮಾರ ;—ಪ್ರಭು, ಈವರೆಗೆ ಎರಡುಸಾರೆ ತಮ್ಮನ್ನು ನಿರಾಸೆಗೊಳಿಸಿದ್ದಾಯಿತು. ಯತ್ನವಿಲ್ಲ. ಕೋಪ ಮಾಡಿಕೊಳ್ಳಬಾರದು, ನಾಳೆ ಬೆಳಗ್ಗೆ ದಯಮಾಡಿಸೋಣವಾಗಲಿ, ಈ ವಿಷಯವನ್ನು ಖಂಡಿತವಾಗಿಯೂ ಇತ್ಯರ್ಥ ಪಡಿಸುವೆನು,

ಈಶ್ವರ:—ಆಗಲಿ. ನೋಡಿಕೋ. ಇದೇ ಕಡೆಯ ಅವಧಿ. ಈ ಅವಧಿಗೆ ತಪ್ಪಿದರೆ ನಾನು ಮತ್ತೆ ಬರುವುದಿಲ್ಲ.

ಮಾರ:—ಹಾಗೆಯೇ ಆಗಬಹುದು. ಇನ್ನುಮುಂದೆ ತಾವು ಬರಬೇಕಾದ ಆವಶ್ಯಕತೆಯೇ ಇರುವುದಿಲ್ಲವೆಂಬಂಶವು ತಮಗೇ ಅನುಭವಕ್ಕೆ ಬರುವುದು.

ಈಶ್ವರ:—ಹಾಗಾದರೆ ನಾನು ಹೋಗಿ ಬರಲೇ ?

ಮಾರ:—ಅಗತ್ಯವಾಗಿ ದಯಮಾಡಿಸಬಹುದು. ಸಾಷ್ಟಾಂಗ ಮಾಡುತ್ತೇನೆ. ಪ್ರಭು. ಅಂತಃಕರಣವಿರಲಿ. ( ಈಶ್ವರನು ಹೋಗುವನು ). ಜಗತ್ಪ್ರಭು. ಏನು ನಿನ್ನ ಲೀಲೆ ! ಎಲ್ಲ ಯವರೆಗೆ ಪರೀಕ್ಷೆ ! ಎಷ್ಟುದೂರ ಒರೆಗೆ ಹಚ್ಚುವುದು ! ಬೇಡ; ಪ್ರಭು. ನೀನೇ ಸೋಲುವೆ. ಅಲ್ಪನಾದ ನನಂಥಾ ಭಕ್ತನಿಗೆ ನೀನು ಸೋಲುವುದು ಯೋಗ್ಯವಲ್ಲ. ಆಗಲಿ. ನಿನ್ನಿಚ್ಛೆಯಂತೆಯೇ ಆಗಲಿ ನಾನೂ ಸಿದ್ಧನಾಗಿದ್ದೇನೆ. ಮನೆಗೆ ಹೋಗಿ ಮುಂದಿನ ಯೋಚನೆಯನ್ನು ಮಾಡು ವೆನು (ಹೋಗುವನು).

## ೨ನೇ ಪ್ರವೇಶ

(ಕೈಲಾಸ ಪ್ರದೇಶ ಇಬ್ಬರು ಪ್ರಮಥರು)

೧ನೆ ಪ್ರಮಥ:—ತಾಂಡವ. ಜಗನ್ಮಾತೆಯು ಈಚೆಗೆ ಸರ್ವದಾ ಅಂತಃಪುರದಲ್ಲಿಯೇ ಇರುವಳಲ್ಲಾ ಕಾರಣವೇ ನಿರಬಹುದು ?

ತಾಂಡವ:—ಶಾಂಭವ ಪತಿವಿರಹ ದುಃಖದಿಂದ ತಪ್ತಳಾದ ದೇವಿಯು ಈ ರೀತಿ ಶುದ್ಧಾಂತವಾಸಿನಿಯಾಗಿರುವಳು.

ಶಾಂಭವ:—ಅದೇಕೆ ? ಸ್ವಾಮಿಯು ಕೈಲಾಸದಲ್ಲಿಲ್ಲವೆ ? ಎಲ್ಲಿಗೆ ಹೋಗಿದ್ದಾನೆ ?

ತಾಂಡವ:—ಇಕ್ಕದ ಮಾರನೆಂಬ ಭಕ್ತನಿಂದ ಭಿಕ್ಷವನ್ನು ತರುವುದಾಗಿ ನಮ್ಮೆಲ್ಲರ ಸಮಕ್ಷಮ ಹೇಳಿ ಪ್ರಭುವು ಜಂಮವೇಷಧಾರಿಯಾಗಿ ಹೋದವನು ಇಂದಿನವರೆಗೂ ಕೈಲಾಸಕ್ಕೆ ಹಿಂದಿರುಗಿಯೇ ಇಲ್ಲ.

ಶಾಂಭವ:—ತಾಂಡವ. ಯಃಕಶ್ಚಿತರಾದ ಮಾನವರಿರುವೆಡೆಗೆ ದೇವಾದಿ ದೇವನಾದ ಶಂಕರನು ತಾನೇ ಹೋಗಲೇಕೆ ? ಮಧುವು ದುಂಬಿಗಳನ್ನರಸುವಂತಾಯಿತು. ಅಲ್ಪಸತ್ವರಾಗಿ ಜರಾಮಣ ವ್ಯಾಧಿಗಳಿಗಧೀನರಾದ ನರ ಹುಳುಗಳಿಗಾಗಿ ಜಗತ್ಪಿತನು ಬೇರೆ ಬೇರೆ ರೂಪಧಾರಣೆ ಮಾಡಿಕೊಂಡು ಹೋಗಿ ಏಕೆ ಅಲೆದಾಡಬೇಕು ? ಇದು ಆತನ ಪದವಿಗೂ ಗೌರವಕ್ಕೂ ಕುಂದಲ್ಲವೆ. ನನಗೇನೋ ಇದು ಕೇವಲ ಸೋಜಿಗವಾಗಿದೆ.

ತಾಂಡವ:—ಶಾಂಭವ. ಮಾನವರನ್ನು ಯಃಕಶ್ಚಿತರೆಂದೆಯಾ! ನಿನ್ನ ಅಜ್ಞಾನಕ್ಕಾಗಿ ನಗುಬರುತ್ತದೆ. ಅಯ್ಯಾ ಜನ್ಮ ಕೋಟಿಗಳಲ್ಲೆಲ್ಲಾ ಮಾನವ ಜನ್ಮವೇ ಶ್ರೇಷ್ಠತಮವಾದುದ್ದು. ನಮ್ಮ ಈ ದೇವಶರೀರದಿಂದ ನಮಗೆ ಮೋಕ್ಷ ಸಾಧನೆಗೆ ಅವಕಾಶವೇ ಇಲ್ಲ. ಜನ್ಮರಹಿತವಾದ ಪರಮ ಪದವನ್ನು ಮಾನವ ಜನ್ಮವನ್ನೆತ್ತಿಯೇ ಸಾಧಿಸಬೇಕಲ್ಲದೆ ಅನ್ಯಥಾ ಸಾಧ್ಯವಿಲ್ಲ. ಹೀಗಿರುವಲ್ಲಿ ಮನುಷ್ಯರನ್ನು ಹುಳುಗಳಿಗೆ ಹೋಲಿಸುವುದು ಅವಿವೇಕವಲ್ಲವೇ ! ನಾವಾದರೂ ಹಿಂದೆ ಒಂದಾನೊಂದು ಕಾಲದಲ್ಲಾರ್ಜಿಸಿದ ಪುಣ್ಯ ವಿಶೇಷದಿಂದ ಲಭಿಸಿರುವ ಈ ಸಾಮಿಪ್ಯ ಸುಖವನ್ನನುಭವಿಸಿದ ನಂತರ ಮತ್ತೆ ಮಾನವ ಜನ್ಮವನ್ನೆತ್ತಿಯೇ ಪರಮ ಪದ ಸಾಧನೆಯನ್ನು ಮಾಡಿಕೊಳ್ಳಬೇಕಾಗಿರುವುದು. ಇನ್ನು ಭಕ್ತರಿಗಾಗಿ ಪರಶಿವನು ಹೋಗುವುದೇಕೆಂದೆಯಾ !

ಕಂದ|| ತರಳನ ರೋದನ ದನಿಯಂ |
ಮರೆಯೊಳ್ ಮನೆಗೆಲಸಗೆಯ್ವ ಮಾತೆಯು ಕೇಳಲ್||
ಹಿರಿದಾತುರ ದಿಂದೋಡುತೆ |
ಬರಲಾಲಿಂಗಿಸಲದೇಕೆ ಮುದಗೊಳಲೇಕೈ || ಮತ್ತು

ಕಂದ|| ಪಾಶವ ನಿನ್ನಯ ಕಂಡದಿ |
ಬೀಸುತೆ ಸೆಳೆಯಕ್ಕೆ ಚಲಿಸದಿರೆ ನಿನ್ನಳವೇ ||
ಕೂಸಿನ ರೋದನದೊಲು ಮೇಣ್ |
ಪಾಶದ ವೋಲ್ಬಕುತನೊಲ್ಮೆ ದೇವನ ನೆಳೆಗುಂ ||

ಆದ್ದರಿಂದಲೇ ಪ್ರಭುವು ಮಾರಭಕ್ತನ ವಿಲಕ್ಷಣ ಭಕ್ತಿ ಪಾಶಕ್ಕೊಳಪಟ್ಟ ಕ್ಷುದ್ರ ಮಾನವನಂತೆ ಎಡೆಬಿಡದೆ ಅವನ ಹಿಂದೆ ಮುಂದೆ ಸುತ್ತುತ್ತಿರುವನು.

ಶಾಂಭವ:—ಹಾಗಾದರೆ ಇಕ್ಕದ ಮಾರನು ಅಷ್ಟು ಶ್ರೇಷ್ಠ ಭಕ್ತನೇ ? ಅವನು ಮಹಾ ಲೋಭಿಯಲ್ಲವೇ ?

ತಾಂಡವ:—ಅಯ್ಯಾ ಆವನು ಲೋಭಿಯಲ್ಲ. ಲೋಭವೃತ್ತಿ, ಕಳೆದು ಹೋದರೆ ದುಃಖಪಡುವುದಿಲ್ಲ. ಆದರೆ ಕೈ ಯೆತ್ತಿ ಕೊಡುವುದಿಲ್ಲವೆಂಬ ನಿರ್ಬಂಧಕ್ಕೆ ಒಳಗಾಗಿದ್ದಾನೆ. ಆದ್ದರಿಂದಲೇ ಪ್ರಭುವು ಒಂದು ಸೇರು ನವಣೆಗಾಗಿ ಇಷ್ಟು ಅಲೆಯುತ್ತಿರುವುದು. ಅವನೂ ಇಷ್ಟು ಕಾಡಿಸುತ್ತಿರುವುದು. ಇಷ್ಟರಲ್ಲಿಯೇ ಅವನ ಭಕ್ತಿ ಪರೀಕ್ಷೆಯು ಮುಗಿದು ಅವನು ಕೈಲಾಸಕ್ಕೆ ಬರುವನೆಂದು, ನಾರದರು ಹೇಳಿದ್ದನ್ನು ಮರೆತೆಯಾ.

ಶಾಂಭವ:—ತಾಂಡವ, ನಿನ್ನ ಮಾತು ಸತ್ಯ. ಇದುವರೆಗೂ ನನಗೆ ಇಷ್ಟುಮಾತ್ರ ತಿಳಿಯದೆ ಇದ್ದದ್ದು ಆಶ್ಚರ್ಯವೇ ಸರಿ. ಸಂಧ್ಯಾಕಾಲವಾಯಿತು. ಇನ್ನು ಹೋಗೋಣ ನಡೆ.

(ಹೋಗುವರು)

## ೩ ನೇ ಪ್ರವೇಶ

ಮಾರಿ :—(ಪ್ರವೇಶಿಸಿ) ವೃತ್ತ :—

ಶಿವ ಪಾದಾಬ್ಜವನರ್ಚಿಸಲ್ ಪ್ರಿಯಕರಂ ತಾಂಪೋದನೇ ವೊಲ್ಲಿ ನಿಂ | ರವಿಯಸ್ತಂಗತನಾದ ಪರ್ಬಿತು ಮಹಾ ಘೋರಾಂಧಕಾರಂ, ಘನಾ | ಟವಿಯೊಳ್ ಪೆಂಗೆಳೆಯೊ ರ್ವಳಿರ್ಪನಕಟಾ ದುರ್ಜಂತು ಜಾಲೋದ್ಗತಂ | ರವ ಮ ತ್ಸಂತ ಸುಭೀಕರಂ ಶಿವ ಮಹಾದೇವಾಣ್ಮ ತಾಂ ಬಾರನೇ||

ಕಂದ|| ಪಸಿದನೊ ಮೇಣ್ ಭುಂಜಿಸಿದನೊ |
ಶಶಿಧರನಂ ಸೇವಿಸಿದನೊ ಸೇವಿಸದಿಹನೋ ||
ಬಿಸಿಲೊಳ್ ಬಳಲ್ದನೊ ನಲಿದನೊ |
ಬೆಸನೇಂ ಸಮನಿಸಿತೊ ಬಾರನೇತಕೊ ಪ್ರಿಯತಾಂ ||

ಇಷ್ಟು ಹೊತ್ತಾದರೂ ಪ್ರಾಣನಾಥನು ಏಕೆ ಬಾರದೆ ಇರ ಬಹುದು. ಮನಸ್ಸು ಬಹಳವಾಗಿ ಕಳವಳಿಸುತ್ತಿರುವದಲ್ಲಾ. ಏನು ಮಾಡಲಿ? ಸ್ವಲ್ಪ ದೂರ ಆ ದಾರಿಯಲ್ಲಿ ಹೋಗಿ ನೋಡುವೆನು. (ಮುಂದೆ ಬಂದು ನೋಡಿ) ಬದುಕಿದೆನು. ಕಾಂತನು ಇತ್ತಲೇ ಬರುತ್ತಿರುವನು. ಮುಖದಲ್ಲಿ ಬಳಲಿಕೆ ಯೂ ಉಪವಾಸವೂ ವ್ಯಕ್ತವಾಗುತ್ತಿರುವುವು. ಭೋಜನ ಮಾಡಿರಲಿಕ್ಕಿಲ್ಲವೇ ? ಸಮೀಪ ಹೋಗಿ ವಿಚಾರಿಸುವೆನು. (ಮಾರನು ಪ್ರವೇಶಿಸುವನು. ಅವನ ಕೈ ಹಿಡಿದು) ನಾಥ, ಗಿರಿಯ ಯಾತ್ರೆಯು ಸುಖಕರವಾಗಿ ಪೂರೈಸಿತೆ ?

ಮಾರ :—ಸಖಿ, ಪ್ರಭುದರ್ಶನ ದೀಕ್ಷಾವಿಸರ್ಜನೆಗಳೇನೋ ಆದುವು. ಪ್ರಸಾದಗ್ರಹಣಕ್ಕೆ ಮಾತ್ರ ಅವಕಾಶವಾಗಲಿಲ್ಲ

ಮಾರಿ :—ನಾನೂಹಿಸಿದಂತೆಯೇ ಆಯಿತು. ಅದೇಕೆ ?

ಮಾರ :—ಮತ್ತೇನು ? ಆ ಜಂಗಮಯ್ಯನವರು ಬಂದರು.

ಮಾರಿ :—ಅಯ್ಯೋ ಶಿವಶಿವ, ಅಲ್ಲಿಗೂ ಹೇಗೆ ಬಂದಿರಬ ಹುದು ?

ಮಾರ :—ಮೊದಲು ಇಲ್ಲಿಗೆ ಹೇಗೆ ಬಂದಿದ್ದರೋ ಅಲ್ಲಿಗೂ ಹಾಗೆಯೇ ಬಂದಿದ್ದರು. ಮತ್ತೆ ನಾಳೆಯದಿನ ಇಲ್ಲಿಗೂ ಹಾಗೆಯೇ ಬರುತ್ತಾರೆ. ಅವರಿಗೆ ಮಾತು ಕೊಟ್ಟಿದ್ದ ಸೇರು ನವಣೆಗೆ ನಾಳೆಯೇ ಕಡೆಯ ಅವಧಿಯೆಂದು ಹೇಳಿ ದ್ದೇನೆ. ಸಖಿ, ಪ್ರಭುವು ನಮ್ಮೊಂದಿಗೆ ಹೀಗೆಯೇ ಎಷ್ಟು ದಿನಗಳು ಆಟವಾಡಬೇಕೆಂದಿದ್ದಾನೆಯೋ ? ಏನೇ ಆಗಲಿ. ಈ ಸಾರೆ ಆತನಿಗೆ ಒಳ್ಳೆಯ ಸೊಗಸಾದ ಆಟವನ್ನು ತೋ ರಿಸೋಣ. ನೋಡಿ ನಲಿಯಲಿ. ಈ ಸಾರೆಯ ಪರೀಕ್ಷೆ ಯಲ್ಲಿ ವ್ರತ ಭಂಗವಾದರೂ ಆಗಬೇಕು. ಇಲ್ಲವೇ ಪ್ರಭುವು ನಿಜರೂಪದಿಂದ ದರ್ಶನವನ್ನಾದರೂ ಕೊಡಬೇಕು.

ಮಾರಿ :—ಈಗ ನಾವು ಮಾಡಬೇಕಾದುದೇನು ?

ಮಾರ :—ಅರಮನೆ ಗುರುಮನೆಗಳಿಗೆ ತೀತ್ತಾಗಲಿ ಅಥವಾ ಸತ್ತಾಗಲಿ ತೀರಿಸಲೇಬೇಕು. ಈಗ ನಾವು ತೆರುವಂತಿಲ್ಲ ಆದ್ದರಿಂದ ಎರಡನೇ ಮಾರ್ಗವನ್ನವಲಂಬಿಸಬೇಕು. ಪ್ರ ಯುಕ್ತ ನಾಳೆ ಬೆಳಗಾಗುತ್ತಲೇ ನಾನು ಸತ್ತವನಂತೆ ನಟಿಸಿ ಮುಸುಕಿಟ್ಟು ಮಲಗಿಕೊಳ್ಳುವೆನು. ಆತನು ಬರುವುದನ್ನು ಕಂಡಕೂಡಲೇ ನೀನು ಗಟ್ಟಿಯಾಗಿ ಅಳುವುದಕ್ಕಾರಂಭಿಸು. ತಾನಾಗಿಯೇ ಹಿಂತಿರುಗುವನು. ಇದು ಹೊರತು ವಾಗ್ದಾ ನವನ್ನು ತಪ್ಪಿಸಲು ಬೇರೆ ದಾರಿಯೇ ಇಲ್ಲ.

ಮಾರಿ :—ನಾಥ, ನನಗೇಕೋ ಈ ಮಾತನ್ನು ಕೇಳಿ ಭಯ ವಾಗುತ್ತಿರುವುದು. ನಿನ್ನನ್ನು ಆ ಸ್ಥಿತಿಯಲ್ಲಿ ನೋಡಲು ನನಗೆ ಧೈರ್ಯ ಸಾಲದು. ಈ ಸಾಯುವುದು ಬೇಡ. ಬೇರೆ ಏನಾದರೂ ಉಪಾಯವನ್ನು ಯೋಚಿಸು.

ಮಾರ :—ಕಲ್ಯಾಣಿ, ಹೀಗೇಕೆ ಹೇಳುವೆ ? ಬೇರೆ ಉಪಾಯ ಗಳಿದ್ದರೆ ನಾನು ಅವುಗಳನ್ನೇ ಅನುಸರಿಸುತ್ತಿದ್ದೆ. ಯತ್ನ ವಿಲ್ಲದೆ ಹೀಗೆ ಮಾಡಬೇಕಾಗಿದೆ. ಸತ್ತಂತೆ ನಟಿಸಿದ ಮಾತ್ರ ಕ್ಕೇನೆ ಸತ್ತಹಾಗೆಯೇ ಆಯಿತೆ? ಅದಕ್ಕಾಗಿ ಹೆದರುವುದೆ? ಅಲ್ಲದೆ ಸಾಕ್ಷಾತ್ತಾಗಿ ಮೃತ್ಯುಂಜಯನೇ ಎದರಿಗಿರಲು ಭಯಪಡುವುದೇತಕ್ಕೆ. ಹುಚ್ಚಿಯಂತಾಡಬೇಡ. ಈಗಾ ಗಲೇ ನಮ್ಮ ಸತ್ವ ಪರೀಕ್ಷೆಯ ಮುಕ್ತಾಯಕಾಲ. ಸುಮ್ಮನೆ ನಾನು ಹೇಳಿದಂತೆ ಮಾಡು.

ಮಾರಿ :—ಪ್ರಭು, ನೀನೇನು ಹೇಳಿದರೂ ನನ್ನ ಮನಸ್ಸಿಗೆ ಸಮಾಧಾನವಾಗಲಾರದು. ಯತ್ನವಿಲ್ಲ, ಆಗಲಿ ಭಗವಂ ತನ ಇಚ್ಛೆಯಂತೆ ನಾವು ನಡೆಯಲೇ ಬೇಕು. ದೇವ, ಚಂದ್ರಮೌಳೀ, ನಮ್ಮಲ್ಲಿ ಕೃಪೆದೋರು.

ಭಾಮಿನೀ ಷಟ್ಪದಿ :—

ದೇವ ಕರುಣಾಕರ ಸದಾಶಿವ |
ಭಾವಜಾತಕ ಭಕ್ತಪೋಷಕ |
ಪಾವನಾತ್ಮ ಪರಾತ್ಪರಾಚ್ಯುತ ಪರಮಪದ ದಾತ ||
ಭಾವಭಕ್ತಿ ಪ್ರಿಯ ನಿರಾಮಯ |
ಪಾವಕಾಕ್ಷ ಪವಿತ್ರ ಚೇತನ |
ಕಾವುದಾನತರೆಮ್ಮ ರಜತಗಿರೀಶ ಸರ್ವೇಶ ||

ನಾಥ ಈ ದಿನವೆಲ್ಲಾ ಹಸಿದುಕ್ಕೊಂಡೇ ಇರುವೆ. ನಡೆ ಮೊದಲು ಭೋಜನಮಾಡು. ಅನಂತರ ಮುಂದಿನ ಕಾರ್ಯ ಗಳನ್ನು ಯೋಚಿಸೋಣ.

ಮಾರ .—ನೀನೂ ಸಹ ನನ್ನಂತೆಯೇ ಉಪವಾಸವಿದ್ದೀಯೆ. ನಡೆ ಹೋಗೋಣ. (ಹೋಗುವರು)

## ೪ನೇ ಪ್ರವೇಶ

(ನಾರದ ಪ್ರವೇಶಿಸಿ)

ನಾರದ :—

ಕಂದ|| ಜಗಮಿದು ಮಾಯಾರಂಗಂ |
ಬಗೆವಡೆ ಜೀವರ್ಕಳದರ ಪಾತ್ರಂಗಳ್ ಸೋ |
ಜಿಗದಮಿತ ಪ್ರಯೋಗಂಗಳ್ |
ನಗಜೇಶನೆ ಸೂತ್ರಧಾರಿಯುಂ ನೋಟಕನುಂ ||

ಇಕ್ಕದ ಮಾರನ ಸತ್ವಪರೀಕ್ಷೆಯು ಯಾವ ಅಂತಸ್ತಿಗೆ ಬಂತೆಂಬುದು ತಿಳಿಯಲಿಲ್ಲ. ದೇವನೇ ಸೋಲುವನೋ ಅಥವಾ ಭಕ್ತನೇ ಸೋಲುವನೋ ನೋಡಬೇಕಾಗಿದೆ. ಇಬ್ಬರೂ ಪರಸ್ಪರರನ್ನ ಮೀರಿಸಲು ಯತ್ನಿಸುತ್ತಿದ್ದಾರೆ. ಇವರಲ್ಲಿ ಒಬ್ಬನು ಸರ್ವಶಕ್ತ. ಒಬ್ಬನು ಸರ್ವಭಾಗಗಳಲ್ಲಿಯೂ ಅಶಕ್ತ. ಒಬ್ಬನು ಸ್ವಾಮಿ. ಮತ್ತೊಬ್ಬನು ಭೃತ್ಯ ಒಬ್ಬನು ಸೂತ್ರಧಾರಿ. ಮತ್ತೊಬ್ಬನು ಅವನ ಕೈಯೊಳಗಿನ ಸೂತ್ರದ ಬೊಂಬೆ. ಸೂತ್ರಧಾರಿಯು ಬೊಂಬೆಯನ್ನಲ್ಲಾಡಿಸಲಾರ ಬೊಂಬೆಯೇ ಸೂತ್ರಧಾರನನ್ನ ತನ್ನಿಷ್ಟಬಂದಂತೆ ಕುಣಿಸುತ್ತಿದೆ. ಇದೀಗ ವಿಚಿತ್ರ. ವಿನೋದವು ಹೇಗೆ ಕೊನೆಗಾಣುವುದೋ ನೋಡಬೇಕು. ಆಗಲಿ. ಅಗೋ, ಪರಮೇಶ್ವರನೇ ಬರುತ್ತಿರುವನು. ವಿಚಾರಿಸಿದರೆ ಸಕಲವೂ ತಿಳಿಯುವುದು.

ಈಶ್ವರ:—ಭಕ್ತರಲ್ಲೆಲ್ಲಾ ಅಗ್ರತಾಂಬೂಲವನ್ನ ಇಕ್ಕದಮಾರ ಕೊಡದಮಾರಿಯರಿಗೇ ಕೊಡಬೇಕು. ಅವರ ಬುದ್ಧಿ ಚಾತುರ್ಯವೆಷ್ಟು ! ಯುಕ್ತಿಗಳೆಷ್ಟು ! ಮೋಸಗಾರಿಕೆಯೆಷ್ಟು ! ಅವುಗಳೊಂದಿಗೇನೆ ಅವರು ನನ್ನಲ್ಲಿಟ್ಟಿರುವ ಅಗಾಧವಾದ ಭಕ್ತಿಯೆಷ್ಟು ! ಅಬ್ಬಾ ! ಇದುವರೆಗೂ ದೇವ ದಾನವ ಗಂಧರ್ವ ಮಾನವಾದಿಗಳಲ್ಲಿ ಇಂತಹ ವಿಲಕ್ಷಣ ಭಕ್ತರನ್ನ ನಾನು ನೋಡಿರಲಿಲ್ಲ. ಆಶ್ಚರ್ಯ ! ಒಂದು ಭಾಗದಲ್ಲಿ ನೋಡಿದರೆ ದೇವತೆಗಳಿಗೂ ಸಹ ಮಾನವರಷ್ಟು ಬುದ್ಧಿ ಕುಶಲತೆ ಇರಲಾರದು. ನಾನು ಎಷ್ಟು ಸಾರಿ ಹೋಗಿ ಯಾಚಿಸಿದಾಗ್ಯೂ ಭಿಕ್ಷವನ್ನು ಇಲ್ಲವೆನ್ನುವುದಿಲ್ಲ. ಕೊಡುವುದಿಲ್ಲ. ಮಾತುಗಳಾದರೋ ಅಮೃತಪೂರ್ಣವಾಗಿರುವುವು. ಮುಷ್ಟಿ ಮಾತ್ರ ನಡಿಯುವುದಿಲ್ಲ. ಆಗಲಿ. ಈ ಕಡೆಯ ಅವಧಿಯಲ್ಲಿ ಇವನನ್ನು ಚೆನ್ನಾಗಿ ಒರೆಗೆ ತಿಕ್ಕಿ ನೋಡಿ ದಿವ್ಯ ಸಾಯುಜ್ಯ ಪದವಿಯನ್ನನುಗ್ರಹಿಸುತ್ತೇನೆ. (ತಿರುಗಿ ನೋಡಿ) ನಾರದ ನೀನು ಬಂದದ್ದು ಯಾವಾಗ. ಮತ್ತೇನು ವಿಶೇಷ?

ನಾರದ :—ದೇವ, ಈಗತಾನೇ ಬಂದೆನು. ಇಕ್ಕದ ಮಾರನಿಂದ ಭಿಕ್ಷವನ್ನು ತಂದಾಯಿತೆ ?

ಈಶ್ವರ :—ಇನ್ನೂ ಇಲ್ಲ. ಇಷ್ಟರಲ್ಲಿಯೇ....( ಅರ್ಧೋಕ್ತಿ )

ನಾರದ :— ಇಷ್ಟರಲ್ಲಿಯೇ ಏನು ? ಸೋತು ಹಿಂದಿರುಗುವಿಯೋ ?

ಈಶ್ವರ :—ಏನು ? ಸೋಲುವುದೇ ? ನಾರದ, ನೀನು ಯಾವಾಗಲೂ ಹೀಗೆ ಮುಳ್ಳು ಮೊನೆಯಂತಹ ಮಾತುಗಳನ್ನೇ ಆಡುವುದೇಕೆ ?

ನಾರದ :—ಮಾತುಗಳು ಮುಳ್ಳುಮೊನೆಯಂತೆ ಚುರುಕಾದರೂ ಅವುಗಳ ಪರಿಣಾಮವು ಚಂದನ ಗಂಧದಂತೆ ಸುಖಕರವಾದದ್ದು. ಇರಲಿ. ಇಕ್ಕದ ಮಾರನು ನಿನಗೆ ಭಿಕ್ಷವನ್ನು ನೀಡುವುದೆಂದು ?

ಈಶ್ವರ :—ನಾಳೆಯ ದಿನ. ಇದೇ ಕಡೆಯ ಅವಧಿ. ಈ ಅವಧಿಗೆ ತಪ್ಪದೆ ಖಂಡಿತ ಇತ್ಯರ್ಥಪಡಿಸುವುದಾಗಿ ಹೇಳಿದ್ದಾನೆ. ನಾಳೆ ಕೊಡದೇ ಇದ್ದರೆ ಇನ್ನು ಮುಂದೆ ಅವನ ಬಳಿಗೆ ನಾನು ಎಂದೆಂದೂ ಹೋಗುವುದಿಲ್ಲ.

ನಾರದ :—ದೇವ, ನಾಳೆಯೂ ನೀನು ಹೋಗಬೇಕಾದ ಆವಶ್ಯಕವೇ ತೋರಲಿಲ್ಲ. ವೃಥಾ ಅಲೆದಾಟವೊಂದೇ ನಿನಗೆ ಫಲ. ಆವಸಿಗೂ ಸುಮ್ಮನೆ ತೊಂದರೆ. ಹಾಯಾಗಿ ಕೈಲಾಸಕ್ಕೆ ಹಿಂದಿರುಗು ಆ ಲೋಭಿಯ ಒಂದು ಸೇರು ನವಣೆಯಿಂದ ನಿನಗಾಗಬೇಕಾದ್ದೇನು ?

ಈಶ್ವರ :—ನನಗಾಗಬೇಕಾದುದೇನೂ ಇಲ್ಲ. ನಾರದ, ಅವನಿಗೇ ಮುಕ್ತಿಯಾಗಬೇಕಾದದ್ದು.

ನಾರದ:—ಏನು ! ಮುಕ್ತಿಯೆ ? ಅದೂ ಇಕ್ಕದ ಮಾರನಿಗೇ ? ಆಶ್ಚರ್ಯ ! ಪರಮಾಶ್ಚರ್ಯ ! ಪ್ರಭು. ನೀನೇ ಈ ಮಾತನ್ನಾಡುತ್ತಿರುವೆಯಾ ?

ಈಶ್ವರ :—ಅದೇಕೆ ದೇವರ್ಷಿ, ಅಷ್ಟೊಂದು ಆಶ್ಚರ್ಯಪಡುತ್ತಿರುವೆ.

ನಾರದ :—ದೇವಾ ! ಇಂತಹ ಪರಮ ಲೋಭಿಗೆ ಮುಕ್ತಿಯಾಗುವುದೆಂದರೆ ಯಾರಿಗೆ ತಾನೇ ಆಶ್ಚರ್ಯವಾಗದು.

ಕಂದ|| ಸಾಕ್ಷಾತ್ಪ್ರಭು ನೀನೈತರೆ |
ಭಿಕ್ಷದ ಮೇಣ್ ಭೋಜನಂಗಳ ನೀಡದವಂ ||
ಗಕ್ಷಯ ಪದವಿಯ ನೀವೊಡೆ |
ತ್ರ್ಯಕ್ಷನೆ ಪೇಳೆನಗೆ ನರಕ ಸೃಷ್ಟಿಯ ಫಲಮೇಂ ||

ಈಶ್ವರ:—ನಾರದ, ಅಜ್ಞನಂತೆ ಮಾತನಾಡುತ್ತಿರುವೆಯಲ್ಲಾ. ಅಯ್ಯಾ, ಇಕ್ಕದಮಾರನು ಲೋಭಿಯಲ್ಲ. ಅವನ ಮನಸ್ಸನ್ನು ನಾನು ಬಲ್ಲೆ. ಲೋಭ ವ್ರತಕ್ಕೆ ಒಳಗಾಗಿ ಧರ್ಮಸಂಕಟಕ್ಕೆ ಗುರಿಯಾಗಿದ್ದಾನೆ. ಮುಕ್ತಿಗೆ ಅಂತಃಕಾರಣವಾದ ಮನಶ್ಶುದ್ಧಿಯು ಪ್ರಾಧಾನ್ಯವಲ್ಲದೆ ಬಹಿಃಕಾರಣ

ಗಳಾದ ವ್ರತದಾನಾದಿಗಳಲ್ಲವೆಂಬುದನ್ನು ನೀನೇನೂ ಅರಿಯದವನಲ್ಲ. ಅವನ ಭಕ್ತಿಯೇ ಅವನಿಗೆ ಮುಕ್ತಿಯನ್ನು ನೀಡುವುದು. ಕೇಳು :—

ಕಂದ|| ಮನಮುದು ಪಾಪದ ತೌರ್ಮನೆ |
ಯೆನಿಸಿರೆ ಜಪ ನೇಮ ದಾನ ವ್ರತ ನಿಷ್ಠೆಗಳಿಂ ||
ಜನದುಂ ಮೋಹಿಪ ವಂಚಕ |
ರನು ದಂಡಿಸಲೆಂದೆ ನರಕಮಂ ಸೃಜಿಸಿರ್ಪಂ ||

ಇಷ್ಟೇ ಹೊರತು ಆಡಂಬರ ದ್ವೇಷಿಗಳಾದ ಭಕ್ತರಿಗಲ್ಲ. ಇಷ್ಟರಲ್ಲಿಯೇ ಮಾರಭಕ್ತನನ್ನು ನೀನು ಕೈಲಾಸದಲ್ಲಿ ನೋಡುವೆ. ಆಗ ಅವನ ಭಕ್ತಿಮಹಿಮೆಯು ನಿನಗೇ ತಿಳಿಯುವುದು. ಇರಲಿ. ಹೊತ್ತಾಗುತ್ತಾ ಬಂತು. ನಾನಿನ್ನು ಹೊರಡುವೆನು. (ಹೋಗುವನು)

ನಾರದ :—ಯಂತ್ರವು ಈಗ ಪೂರ್ಣ ವೇಗದಿಂದ ತಿರುಗಲು ಮೊದಲಾಯಿತು. ಇನ್ನು ತನ್ನ ಕೆಲಸವನ್ನು ಮುಗಿಸದೆ ಅದು ನಿಲ್ಲಲಾರದು. ನಾರದನು ಸಾಮಾನ್ಯನಲ್ಲ. ಅವನ ಪ್ರಯತ್ನವೂ ಎಂದೂ ಯಾವ ಕಾರಣದಿಂದಲೂ ವಿಫಲವಾಗಿಲ್ಲ. ಮುಂದಿನ ಯೋಚನೆಗಳನ್ನು ಮಾಡಲು ನಾನೂ ಹೊರಡುವೆನು. (ಹೋಗುವನು)

ನಾಲ್ಕನೆಯ ಅಂಕವು ಮುಗಿದುದು.

## ಐದನೆಯ ಅಂಕವು

### ೧ನೇ ಪ್ರವೇಶ

(ಮನೆಯಲ್ಲಿ ಇಕ್ಕದ ಮಾರ ಕೊಡದ ಮಾರಿಯರು)

ಮಾರ :—

ಕಂದ|| ಭವಹರ ಭಯಹರ ಶಂಕರ |
ಶಿವಕರ ಸುಕುಮಾರ ನಮಿತ ಸುರಮುನಿ ನಿಕರಾ ||
ಜವಹರ ವರಶೃತಿ ಸಾರಾ |
ಭವ ಕರುಣಿಸಿ ಪೊರೆ ಉದಾರ ಗುಣ ಗಂಭೀರಾ ||

ದೇವ, ಕೈಲಾಸಪತೇ, ಕೋಟಿ ಕೋಟಿ ಸಂವತ್ಸರಗಳಕಾಲ ಫಲಪರ್ಣ ವಾಯ್ವಾಹಾರಿಗಳಾಗಿ ಘೋರ ತಪಸ್ಸನ್ನಾಚರಿಸುವ ಮಹಾ ಯೋಗಿಗಳಿಗೂ ದುರ್ಲಭ ದರ್ಶನನಾದ ನೀನು, ಸಂಸಾರಸಕ್ತನೂ, ಅಜ್ಞಾನಿಯೂ, ಕೃಪಣನೂ ಆದ ನಾನಿರುವಲ್ಲಿಗೇ ಬರುವೆಯಲ್ಲವೇ! ತಂದೆ, ನಿನ್ನ ಕಾರುಣ್ಯಕ್ಕೂ ನನ್ನ ಪುಣ್ಯಭಾಗ್ಯಗಳಿಗೂ ಎಣೆಯುಂಟೆ? ಸಖಿ, ಪ್ರಭುವು ಬರುವ ಹೊತ್ತಾಯಿತು. ನಾನು ಮುಸುಕಿಟ್ಟು ಮಲಗಿಕೊಳ್ಳುವೆನು. ಎಚ್ಚರಿಕೆಯಿಂದಿರು. ಇದೇ ನಮ್ಮ ಜೀವಿತ ನಾಟಕದಲ್ಲಿ ಕೊನೆಯ ಅಂಕ ಇದನ್ನು ಬಹು ಸ್ವಾರಸ್ಯವಾಗಿ ನಟಿಸಬೇಕು.

ಮಾರಿ :—ಆಗಲಿ. ಈ ನಮ್ಮ ವಿಚಿತ್ರ ನಾಟಕದಲ್ಲಿ ಮೊದಲಿನಿಂದಲೂ ನಾನು ಸ್ವಾಮಿಯೆದುರಿಗೆ ನಟಿಸಿರುವುದೆಲ್ಲಾ ಸ್ವಾರಸ್ಯವಾಗಿಯೇ ಇದೆ. ಅದರ ಸವಿಯು ಆತನಿಗೂ ಸ್ವಲ್ಪಮಟ್ಟಿಗೆ ಗೊತ್ತಿದೆ. ಈಗಲೂ ಕೈಲಾದಮಟ್ಟಿಗೂ ಚೆನ್ನಾಗಿಯೇ ನಟಿಸೋಣ.

ಮಾರ:—ಆಗಲಿ. ಜಾಗರೂಕಳಾಗಿರು. (ಮುಸುಕಿಟ್ಟುಕೊಳ್ಳುವನು)

ಮಾರಿ :—ಪರಾತ್ಪರ, ಪಾರ್ವತೀ ರಮಣ. ಏನಿದು ವಿಚಿತ್ರ. ನಾವಂತೂ ಈ ಪ್ರಪಂಚ ನಾಟಕದಲ್ಲಿ ವೇಷಧಾರಿಗಳು. ನಮಗಾಗಿ ನೀನೂ ಹಾಗೆಯೇ ಆಗಬೇಕಾಗಿದೆ. ಇದರಲ್ಲಿ ನಿನ್ನ ಲೀಲೆಯೋ ಹೆಚ್ಚೋ ನಮ್ಮದೇ ಹೆಚ್ಚು ವಿನೋದವೋ ನನಗನಕಾ ತೋಚದಾಗಿದೆ. ನೀನೂ ಆಡಿ ನಮ್ಮನ್ನೂ ಆಡಿಸುತ್ತಿರುವೆ. ಆಗಲಿ. ಆಡು. ನಾವೂ ಆಡುತ್ತೇವೆ. (ಮುಂದೆ ನೋಡಿ) ಅದೋ ಸ್ವಾಮಿಯು ಬರುತ್ತಿರುವನು. ಇನ್ನು ನನ್ನ ರಾಗವನ್ನು ಪ್ರಾರಂಭಿಸುತ್ತೇನೆ.

ವೃತ್ತ|| ಹಾಹಾ ಮನಃಕಾಂತ ಕುತೋ ಗತಸ್ತ್ವರಿ |
ಹಾ ಹಂತಮಾಂ ರಕ್ಷತಿ ಕೋ ವನೇऽಸ್ಮಿನ್ ||

ಈಶ್ವರ :— (ಪ್ರವೇಶಿಸಿ) ಇದುವರೆಗೆ ಎರಡುಸಾರೆ ಕಪಟ ವ್ಯಾಜ್ಯಗಳನ್ನು ಹೂಡಿ, ನನಗೆ ಭಿಕ್ಷವನ್ನು ನೀಡದೆ ತಪ್ಪಿಸಿಕೊಂಡರು. ಈಗ ಮತ್ತೇನು ನೆವಗಳನ್ನು ಕಲ್ಪಿಸುವರೋ ನೋಡೋಣ. (ಮುಂದೆ ನೋಡಿ) ಇದೇನು ! ಈಕೆಯು ಕೇಶಪಾಶವನ್ನು ಕೆದರಿ ಆಕ್ರಂದಿಸುತ್ತಿರುವಂತೆ ಕಾಣುತ್ತಿದೆ. ಮತ್ತೊಂದು ನೂತನ ವಿಘ್ನಕಾರಕ್ಕೆ ಇದು ಪೀಠಿಕೆಯಾಗಿರಬಹುದು. ಆಗಲಿ. ಸಮೀಪ ಹೋಗಿ ನೋಡುತ್ತೇನೆ. (ಮುಂದೆ ಬರುವನು)

ಮಾರಿ :—

ವೃತ್ತ|| ಪಾಹೀತಿ ಕಂ ದೈನ್ಯಮನಾ ಪ್ರಯಾಚೇ |

ಈಶ್ವರ :—( ಎದುರಿಗೆ ಬಂದು ) ತಾಯಿಾ ಏನಾಯಿತು ? ಹೀಗೇಕಳುತ್ತಿರುವೆ ?

ಮಾರಿ :—ತಲೆಯೆತ್ತಿ ನೋಡಿ ದೈನ್ಯದಿಂದ)
ಯಾಹಿ ಪ್ರಭೋ ರಕ್ಷ ಪತಿಂಚ ಮಾಂ ಚ ||

ಈಶ್ವರ :—ಏನಮ್ಮಾ, ಮಾರಭಕ್ತನ ವಿಷಯದಲ್ಲಿ ಅಮಂಗಳ ನುಡಿಗಳನ್ನೇನೋ ಉಚ್ಚರಿಸುತ್ತಿರುವೆಯಲ್ಲಾ ?

ಮಾರಿ:—ಪ್ರಭು. ನನ್ನ ದೌರ್ಭಾಗ್ಯವನ್ನೇನೆಂದು ಹೇಳಲಿ. ನಾವಿಬ್ಬರೂ ವನವಾಸಿಗಳಾಗಿ ವಿಹಂಗಮ ಯುಗ್ಮದಂತೆ ಸಂತೋಷದಿಂದ ಸ್ವೇಚ್ಛೆಯಾಗಿ ಕಾಲಹರಣ ಮಾಡುತ್ತಿರಲು ಹತ ದೈವಕ್ಕೆ ಅಷ್ಟು ಸಹನೆಯಿಲ್ಲದೆ ಹೋಯಿತು.

ಪ್ರಾಣನಾಥನು ನನ್ನೊಬ್ಬಳನ್ನೇ ಈ ನಿರ್ಜನವಾದ ವನದಲ್ಲಿ ಅನಾಥಳನ್ನಾಗಿ ಮಾಡಿ, ಅಯ್ಯೋ. (ಅಳುವಳು)

ಈಶ್ವರ:—ಅಮ್ಮಾ, ಸಮಾಧಾನವನ್ನು ತಂದುಕೊ. ವೃಥಾ ಶೋಕದಿಂದ ಫಲವಿಲ್ಲ ನಡೆದ ಸಂಗತಿಯನ್ನು ಸರಿಯಾಗಿ ತಿಳಿಸು.

ಮಾರಿ:—ದೇವ, ನನ್ನ ಸರ್ವ ನಾಶವನ್ನು ನಾನೇ ಏನೆಂದು ಹೇಳಿಕೊಳ್ಳಲಿ. ಪತಿರಹಿತವಾದ ಸ್ತ್ರೀ ಜನ್ಮವು ಈ ಲೋಕದಲ್ಲಿ ಹೇಯವಾದ ಹೆಣಕ್ಕಿಂತಲೂ ಕಡೆಯಾದದ್ದು. ಪುರುಷನು ನಾರಿಯ ಜೀವಾತ್ಮ. ಪ್ರಭು, ನನ್ನ ಜೀವಾತ್ಮನು ಹೊರಟು ಹೋದನು. ಉಳಿದಿರುವ ನಾನು ಬರಿಯ ಉಸಿರಾಡುವ ಶವ ಮಾತ್ರ. ಇನ್ನು ಈ ಅಮಂಗಲ ಮುಖವನ್ನು ಪ್ರಪಂಚಕ್ಕೆ ತೋರಿಸಲಾರೆನು. ಹೇಗೂ ತಾವು ಸಕಾಲಕ್ಕೆ ದಯಮಾಡಿಸಿರುವಿರಿ. ಮುಂದೇನು ಮಾಡಬೇಕೆಂಬುದನ್ನು ತಾವೇ ನಿರ್ಧರಿಸಬೇಕು.

ಈಶ್ವರ:—ಏನಮ್ಮಾ! ಮಾರ ಭಕ್ತನು ದೇಹತ್ಯಾಗಮಾಡಿದನೆ? ಛೆ, ಛ, ನಾನು ನಂಬಲಾರೆ. ನಿನ್ನೆ ಸಾಯಂಕಾಲ ನಾನು ನೋಡಿದಾಗ ಆರೋಗ್ಯ ದೃಢಕಾಯನಾಗಿದ್ದವನು ರಾತ್ರಿಯೊಳಗಾಗಿ ಸಾಯುವುದೆಂದರೇನು. ನಿನ್ನೆ ದಿನದ ವಿಶೇಷವಾದ ಪ್ರಯಾಣದ ಆಯಾಸದಿಂದ ಮೂರ್ಛೆಗೊಂಡಿರಬಹುದು. ಅಷ್ಟು ಮಾತ್ರಕ್ಕೆ ಪತಿ ಸತ್ತನೆಂದು ಭಾವಿಸುವುದು ಎಲ್ಲಿಯಾದರೂ ಉಂಟೆ? ಯಾವಾಗಲೂ ಮಂಗಲ ವಾಣಿಗಳನ್ನೇ ಉಚ್ಚರಿಸುತ್ತಿರಬೇಕು. ಇಲ್ಲದ ಸಲ್ಲದ ಅಮಂಗಲ ನುಡಿಗಳನ್ನಾಡುತ್ತಿರುವೆಯೇಕೆ?

ಮಾರಿ:—ಪ್ರಭು, ನಿರಾಹಾರಿಯಾಗಿ ಎರಡು ಯೋಜನಗಳ ದೂರವನ್ನು ಉರಿ ಬಿಸಿಲಿನಲ್ಲಿ ನಡೆದದ್ದರಿಂದಲೋ ಏನೋ ರಾತ್ರಿಯೆಲ್ಲಾ ಬಹುವಾಗಿ ಚಡಪಡಿಸಿದನು. ನಾನೂ ನನ್ನ ಕೈಲಾದ ಪ್ರತ್ಯೋಷಧ ಚಾರಗಳನ್ನೆಲ್ಲಾ ಮಾಡಿದೆನು. ಆದರೆ ದುರಾದೃಷ್ಟವಶಾತ್ ಎಲ್ಲವೂ ನಿಷ್ಫಲವಾಯಿತು. ಅರುಣೋದಯದ ವೇಳೆಗೆ ನನ್ನ ಸೌಭಾಗ್ಯ ಕುಮುದವು ಮುಕುಳಿತವಾಯಿತು.

ಈಶ್ವರ:—ನೀನು ಹೇಳುವುದನ್ನೆಲ್ಲಾ ಕೇಳಿದರೆ ನಿನ್ನ ಪತಿಯು ಮೂರ್ಛೆಗೊಂಡಿರುವಂತೆ ತೋರುತ್ತದೆ. ಒಳಗೆ ನಡೆ. ಅವನ ನಾಡಿಗಳನ್ನು ಪರೀಕ್ಷಿಸಿ ನೋಡಿ ಹೇಳುತ್ತೇನೆ. ನನಗೆ ವೈದ್ಯ ವಿದ್ಯೆಯಲ್ಲಿ ಸಂಪೂರ್ಣವಾಗಿಯೂ ಅನುಭವವಿದೆ.

ಮಾರಿ:—ಸ್ವಾಮಿಾ. ನಿರ್ಜೀವ ದೇಹವನ್ನು ಪರೀಕ್ಷಿಸುವುದರಿಂದೇನು ಫಲ? ತಾವು ದಯಮಾಡಿಸೋಣವಾಗಲಿ.

ಈಶ್ವರ:—ದೇಹವು ನಿರ್ಜೀವವೇ ಆಗಿದ್ದರೆ ಪರೀಕ್ಷೆಯಿಂದ ಫಲವಿಲ್ಲ. ಆದರೆ ಅದು ನಿರ್ಜೀವ ಅಥವಾ ಸಜೀವವೆಂಬದು ಪರೀಕ್ಷೆಯಿಂದಲೇ ತಿಳಿಯಬೇಕಲ್ಲದೆ ಅನ್ಯಥಾ ಹೇಗೆ ಸಾಧ್ಯ? ಆದ್ದರಿಂದ ನಡೆ. ನಿನ್ನ ಪತಿಯಿರುವ ಸ್ಥಳವನ್ನು ನನಗೆ ತೋರಿಸು.

ಮಾರಿ:—ಗುರುವೇ ತಮಗೆ ನಿಷ್ಕಾರಣವಾಗಿ ಏಕೆ ತೊಂದರೆಯಾಗಬೇಕು. ಏನೂ ಬೇಡ ನಾನು ಕಷ್ಟಪಡಬೇಕಾದ್ದು ನನ್ನ ವಿಧಿ ತಾವು ದಯಮಾಡಿಸೋಣವಾಗಲಿ.

ಈಶ್ವರ:—ತಾಯಿಾ, ನಿನ್ನ ಪತಿಭಕ್ತಿಯೆಲ್ಲವೂ ಬರೀ ನಟನೆಯೆಂದು ತೋರುತ್ತದೆ ಹಾಗಿಲ್ಲದಿದ್ದರೆ ನಿನ್ನ ಗಂಡನನ್ನು ಜೀವಂತನನ್ನಾಗಿಯೇ ಕೊನೆಗಾಣಿಸುವ ಯೋಚನೆಯನ್ನು ಮಾಡುತ್ತಿರಲಿಲ್ಲ. ಮಾರ ಭಕ್ತನ ವಿಷಯದಲ್ಲಿ ನನಗೆಷ್ಟೋ ವಿಶ್ವಾಸವಿದೆ. ಅದಕ್ಕಾಗಿಯೇ ನಾನು ಪೇಚಾಡುತ್ತಿದ್ದೇನೆ ನಡೆ, ಅವನ ದೇಹ ಸ್ಥಿತಿಯನ್ನು ನೋಡಿದನಂತರ ಮುಂದಿನ ಯೋಚನೆಯನ್ನು ಮಾಡೋಣ.

ಮಾರಿ:—(ಸ್ವಗತ) ಈತನೇನೋ ಏನು ಹೇಳಿದರೂ ಬಿಡುವಂತಿಲ್ಲ. ಬಲಾತ್ಕಾರದಿಂದ ಒಳಗೆ ನುಗ್ಗಿದರೆ ನಾನು ಮಾಡುವುದೇನು? ಇಷ್ಟರ ಮೇಲೆ ಮಾನಾಭಿಮಾನಗಳೆಲ್ಲವೂ ಈತನ ಕೈಯಲ್ಲೇ ಇರಲು ನಮ್ಮ ಯತ್ನವೇನಿದೆ. ಆಗಲಿ, ಆತನಿಗೆ ಅನುಕೂಲವಾಗಿಯೇ ಮಾತನಾಡಿ ಆತನನ್ನು ಸಂತೋಷಪಡಿಸುತ್ತೇನೆ. (ಪ್ರಕಾಶ) ಗುರುವೇ, ತಮ್ಮ ಇಷ್ಟಕ್ಕೆ ನಾನೇಕೆ ಪ್ರತಿಬಂಧಕಮಾಡಲಿ. ನನ್ನ ಮಾತಿನಲ್ಲಿ ತಮಗೆ ನಂಬುಗೆಯಿಲ್ಲ. ಒಳಗೆ ದಯಮಾಡಿಸೋಣವಾಗಲಿ. ತಾವೇ ಕಣ್ಣಾರೆ ನೋಡಿದರೆ ನಿಜಾಂಶವು ತಿಳಿಯುತ್ತದೆ.

ಈಶ್ವರ:—ಆಗಲಿ. ಹೋಗೋಣ ನಡೆ (ಹೋಗುವರು)

## ೨ನೇ ಪ್ರವೇಶ

(ಪ್ರವೇಶ. ಶಯ್ಯಾಗತನಾದ ಮಾರ)

ಮಾರ:—(ಶಯ್ಯೆಯಮೇಲೆ ಕುಳಿತು) ಸ್ವಾಮಿಯು ಬಂದಿರುವನು. ನನ್ನ ಪತ್ನಿಯೂ ಹೇಳಿದ ಮಾತುಗಳಲ್ಲಿ ಆತನಿಗೆ ನಂಬುಗೆಯಿಲ್ಲ. ಹೇಗೆತಾನೆ ಬಂದೀತು?

ವೃತ್ತ|| ಆವಂ ವಿಶ್ವದ ಸೃಷ್ಟಿಪಂ ಸಲಹುವಂ ಸಂಹಾರಮಂಗೆಯ್ವುವಂ| ಆವಂ ಸರ್ವರೊಳಾತ್ಮನೆಂದೆನಿಸುವಂ ಸರ್ವಜ್ಞನಾವಂ ಜಗ| ಜ್ಜೀವಂ ಮಾನುಷ ವೇಷಮಂ ತಳೆದೊಡೇಂ ಸಾಮಾನ್ಯ ನೆಂತಪ್ಪನಾ | ದೇವಂ ಜೀವಿತನೆನ್ನಲೀಕ ಮೃತಿಯಂ ಚಿತ್ಸಾಕ್ಷಿಯೆಂತೊಪ್ಪುವಂ ||

ಈಗ ನೀನಿರುವಲ್ಲಿಗೇ ಬರುವನು. ಆ ಮಹಾನುಭಾವನಿಂದ ರ್ಕ್ಷಿಸಲ್ಪಡಲು ನಾನೆಷ್ಟು ಸುಕೃತಶಾಲಿಯೋ. ನನ್ನ ದೈನ್ಯ ತ್ತಿಯೆಲ್ಲಾ ಅಳಿದು ಮನಸ್ಸಿನಲ್ಲೊಂದು ನವೀನವಾದ ಉಲ್ಲಾಸವು ತಲೆದೋರುತ್ತಿರುವುದು. ಧೈರ್ಯವು ರೂಢ ಮೂಲವಾಗುತ್ತಾ ದೇಹಾಭಿಮಾನವೇ ತಪ್ಪುತ್ತಿರುವುದು. ಮೋ ಪ್ರಭುವು ಬಂದೇ ಬಂದನು. ನಾನಿನ್ನು ಮುಸುಕಿಟ್ಟು ಮಲಗುವೆನು. (ಮಲಗುವನು).

(ಈಶ್ವರ ಕೊಡದ ಮಾರಿಯರು ಪ್ರವೇಶಿಸುವರು)

ಈಶ್ವರ:—ತಾಯಿಾ, ನಿನ್ನ ಪತಿಯಿರುವುದೆಲ್ಲಿ?

ಮಾರಿ:—ಇದೋ ಪ್ರಭು. ಇಲ್ಲಯೇ ತಮ್ಮೆದುರಿನಲ್ಲಿಯೇ ಮಲಗಿರುವನು.

ಈಶ್ವರ.—(ನೋಡಿ) ಓಹೋ! ಇಲ್ಲಿಯೇ ಇದ್ದಾನೆ. ಒಳ್ಳೆಯದು. ನಾಡಿಗಳನ್ನು ಪರೀಕ್ಷಿಸೋಣ. (ಕೈ ಹಿಡಿದು ನೋಡಿ) ಇಕ್ಕವ ಮಾರನು ಸಾಮಾನ್ಯ ಭಕ್ತನಲ್ಲ. ನನ್ನ ಕಣ್ಣಲ್ಲಿಯೇ ಮಣ್ಣೆರಚಲು ಎತ್ನಿಸುತ್ತಿದ್ದಾನೆ. ಆಮೆಯು ತನ್ನ ಅಂಗಗಳನ್ನು ಹೊರಗೆ ಕಾಣಿಸದಂತೆ ಬಿಗಿಹಿಡಿಯುವ ಹಾಗೆ ಇವನು ಉಸಿರನ್ನು ಒಳಗೆ ಬಂಧಿಸಿದ್ದಾನೆ. ಕಲ್ಲು ಗುಂಡಿನಂತೆ ಗಟ್ಟಿಮುಟ್ಟಿಯಾಗಿರುವ ಇವನು ಸತ್ತಿದ್ದಾನೆಯಂತೆ ಇದೂ ಒಂದು ಬಗೆಯ ವಿಲಕ್ಷಣವಾದ ಸಾವು. ಈ ಸಾವಿಗೆ ತಕ್ಕ ಪ್ರತಿಕ್ರಿಯೆಯನ್ನು ಮಾಡಿ ಇವನನ್ನು ಪರೀಕ್ಷಿಸುತ್ತೇನೆ (ಮಾರಿಯ ಕಡೆ ತಿರುಗಿ) ತಾಯಿಾ, ನೀನು ಭಯದಿಂದ ಬುದ್ಧಿಶೂನ್ಯಳಾಗಿ ಇವನು ಮೃತಪಟ್ಟಂತೆ ಭಾವಿಸಿರುವೆಯಲ್ಲದೆ ಇವನಿಗೊದಗಿರುವುದು ಮರಣವಲ್ಲ. ಅತ್ಯಾಯಾಸ, ಅನಾಹಾರಗಳಿಂದ ಒದಗಬಹುದಾದ ಒಂದು ಬಗೆಯ ಸಂಧಿವಾತ. ಇದಕ್ಕೆ ಪ್ರತಿಕ್ರಿಯೆಯನ್ನು ಕೂಡಲೇ ಮಾಡಬೇಕಾಗಿದೆ. ಸ್ವಲ್ಪವೂ ವಿಳಂಬವಾಗಕೂಡದು. ಆದ್ದರಿಂದ ಎರಡು ಬರೆಗುಳಗಳನ್ನು ಚೆನ್ನಾಗಿ ಕೆಂಪಗೆ ಕಾಯಿಸಿಕೊಂಡು ಈ ಕ್ಷಣವೇ ತೆಗೆದುಕೊಂಡು ಬಾ. ಅದರ ಉಷ್ಣದಿಂದ ಇವನಿಗೆ ಚಿಕಿತ್ಸೆ ಮಾಡಿದರೆ ರೋಗವು ಪರಿಹಾರವಾಗಬಹುದು.

ಮಾರಿ:—ಏನು? ಬರೆಗುಳದ ಉಷ್ಣದಿಂದ ಚಿಕಿತ್ಸೆಯೇ? ಇದೆಂಥಾ ಚಿಕಿತ್ಸೆ? ಇದರ ಅರ್ಥವೇ ನನಗಾಗಲಿಲ್ಲ.

ಈಶ್ವರ:—ಅರ್ಥವಾಗದೆ ಇದ್ದರೆ ಸ್ಪಷ್ಟವಾಗಿ ಹೇಳುತ್ತೇನೆ ಕೇಳು. ಈ ಬರೆಗುಳಗಳಿಂದ ಬರೆಗಳನ್ನೆಳೆಯಬೇಕು.

ಮಾರಿ:—ಅಯ್ಯೋ! ಶಿವಶಿವಾ! ಇದೇನನ್ಯಾಯ! ಮೃತ ದೇಹಕ್ಕೆ ಬರೆಹಾಕುವುದೇ?

ಈಶ್ವರ:—ಭದ್ರೇ, ವೃಥಾ ಉತ್ತರ ಪ್ರತ್ಯುತ್ತರಗಳಲ್ಲಿ ಕಾಲ ಹರಣಮಾಡದೆ ಬೇಗ ಹೋಗು. ಇಲ್ಲವೇ ನಿನ್ನ ಪತಿಯ ಪ್ರಾಣಗಳಲ್ಲಿ ನಿನಗೆ ಅಪೇಕ್ಷೆಯಿಲ್ಲದ ಭಾಗದಲ್ಲಿ ಹೇಳಿಬಿಡು. ನಾನಾದರೂ ಕಷ್ಟಪಟ್ಟು ನೋಡಿಕೊಳ್ಳುತ್ತೇನೆ. ಅವನಲ್ಲಿ ನನಗೆಷ್ಟು ವಿಶ್ವಾಸವಿದೆಯೆಂಬುದನ್ನು ನೀನೇನು ಬಲ್ಲೆ?

ಮಾರಿ:—ಅಪ್ಪಣೆಯಂತಾಗಲಿ. (ಮುಂದೆ ಬಂದು. ಸ್ವಗತ) ನಿನ್ನ ವಿಶ್ವಾಸವಿಷ್ಟೆಂಬುದನ್ನು ಅಳೆಯಬಲ್ಲವರಾರು? ಪ್ರಭು, ಈ ಕಥೆಯೆಲ್ಲವೂ ನಿನ್ನ ವಿಶ್ವಾಸದ ಫಲವೇ. ಆಗಲಿ. ಏನೇನು ಮಾಡುವಿಯೋ ಮಾಡು. ಇದುವರೆಗೂ ನೀನು ನಮ್ಮ ಅಧೀನನಾಗಿ ನಾವು ಆಡಿಸಿದಂತೆಲ್ಲಾ ಆಡಿದೆ. ಈಗ ನೀನಾಡಿಸಿದಂತೆ ನಾನಾಡಬೇಕು. ಯತ್ನವಿಲ್ಲ. ನೀನು ಬಿಡುವಂತಿಲ್ಲ. (ಒಳಗೆ ಹೋಗಿ ಮತ್ತೆ ಬಂದು) ಇದೋ ತಮ್ಮ ಅಪ್ಪಣೆಯಂತೆ ಸಲಾಕೆಯನ್ನು ತಂದಿದ್ದೇನೆ. ತೆಗೆದುಕೊಳ್ಳಿ. ಮತ್ತೇನು ಸಾಮಗ್ರಿಗಳು ಬೇಕು?

ಈಶ್ವರ:—ಮತ್ತೇನೂ ಬೇಡ. ಬಾ, ಈತನ ಮುಸುಕನ್ನು ತೆಗೆ. (ತೆಗೆಯುವಳು) ಈ ಗುಳವನ್ನು ತೆಗೆದುಕೋ. ಇದರಿಂದ ನಿನ್ನ ಪತಿಯ ಮೊಳಕ್ಕೆಗೊಂದು ಬರೆಯನ್ನು ಎಳೆ.

ಮಾರಿ:—ಶಿವಶಿವಾ! ಶಿವಶಿವಾ! ಈ ಕಠಿಣ ಕಾರ್ಯವು ನನ್ನಿಂದಾಗದು.

ಈಶ್ವರ:—ನಿಜ. ಇದು ನಿನ್ನಿಂದಾಗುವ ಕಾರ್ಯವಲ್ಲ. ನಾನೇ ಮಾಡಬೇಕು. (ಬರೆಯನ್ನೆಳೆಯುವನು).

ಮಾರಿ:—(ನೋಡಿ) ಅಯ್ಯೋ! ಅಯ್ಯೋ! (ಮೂರ್ಛೆ ಹೋಗುವಳು).

ಈಶ್ವರ:—ಮಾರಭಕ್ತ, ಮಾರಭಕ್ತ. ಎಚ್ಚರವಾಯಿತೇ?

ಮಾರ:—ಮಿಸುಕದೆ ಸುಮ್ಮನಿರುವನು.

ಈಶ್ವರ:— ಅಯ್ಯೋ ಪಾಪ! ಬರೆಹಾಕಿದ್ದರಿಂದ ವಾತವ ನೋವಿಗೆ ಕಾವು ಕೊಟ್ಟಂತಾಗಿ ಹಾಯಾಗಿದೆ. ಇಂಥಾ ದಿವ್ಯಸುಖವು ಬರಿಯ ಮೊಳಕ್ಕೆಗೊಂದಕ್ಕೇ ಏಕೆ? ದೇಹದ ಪ್ರತಿಯೊಂದು ಕೀಲಿಗೂ ಆಗಲಿ. (ಕೀಲು ಕೀಲಿಗೂ ಬರೆಗಳನ್ನೆಳೆದು) ಅಯ್ಯಾ ಶಿಷ್ಯೋತ್ತಮಾ. ಹೇಳಯ್ಯಾ ಹೇಳು. ರೋಗವು ನಿವೃತ್ತಿಯಾಯಿತೇ? (ಮಾರನು ಸುಮ್ಮನಿರುವನು). ಇದೇನು? ಇಂತಹ ಕಠೋರ ಯಾತನೆಯನ್ನೂ ಸೈರಿಸಿಕೊಂಡಿರುವನಲ್ಲಾ. ಆಶ್ಚರ್ಯ. ಉಸಿರಾಟವು ಪೂರಾ ನಿಂತಿರುವುದು. ಏನಿರಬಹುದು? (ಯೋಚಿಸಿ) ಓಹೋ! ತಿಳಿಯಿತು.

ಕಂದ|| ರಾಮನ ಶೌರ್ಯವ ಕಳನೊಳ |
ಗಾಮಾರುತಿ ಭಕ್ತಿಬಲದೆ ಸೆಳೆದವೊಲಿನ್ನಿಂ ||
ದೀ ಮಾರಂ ನಿಜಭಕ್ತಿಯ |
ಸಾಮರ್ಥ್ಯದಿ ಯೋಗಸಿದ್ಧಿಯಂ ಸೆಳೆದಿರ್ಪಂ ||

ಆದುದರಿಂದಲೇ ಇವನು ಅಂತರ್ಮುಖನಾಗಿ ಬಾಹ್ಯಯಾತನೆಯ ಅರಿವೇ ಇಲ್ಲದಿರುವನು. ಇವನ ಪರೀಕ್ಷೆಯು ಇಲ್ಲಿಗೇ ಸಾಕು. ಇನ್ನು ಇವನನ್ನು ಶೀಘ್ರದಲ್ಲಿಯೇ ಅನುಗ್ರಹಿಸಬೇಕು. ಆದರೆ ಇವನ ಧನ ಧಾನ್ಯಾದಿಗಳು ಅದಕ್ಕಡ್ಡಿಯಾಗಿರುವುದರಿಂದ ಅವುಗಳನ್ನೆಲ್ಲಾ ಮೊದಲು ಹರಣ ಮಾಡಿ ಅನಂತರ ಪ್ರತ್ಯಕ್ಷನಾಗುವೆನು. ಪ್ರಕೃತದಲ್ಲಿ ಇವನ ಮಹಿಮೆಯನ್ನು ನೋಡಿ ಸಂತೋಷಪಡಲು ನಾರದನನ್ನೂ, ಪಾರ್ವತಿಯನ್ನೂ ಪ್ರಮಥರನ್ನೂ ಕರೆತರುವೆನು. (ಹೋಗುವನು)

### ೩ನೇ ಪ್ರವೇಶ

(ಪ್ರವೇಶ ನಾಲ್ಕು ಜನ ಪ್ರಮಥರು)

ಗುಹಾನಂದ:—ಶಿವಾನಂದ, ಪ್ರಭುವು ಹೇಳಿದ್ದನ್ನು ಕೇಳಿದೆಯಾ ಎಂತಹ ಆಶ್ಚರ್ಯ!

ಶಿವಾನಂದ:—ಇದರಲ್ಲಿ ಆಶ್ಚರ್ಯವೇನು. ಇಂಥಾ ಸಂದರ್ಭಗಳು ಹಿಂದೆಷ್ಟೋ ನಡೆದಿವೆ ಮುಂದೆಷ್ಟೋ ನಡೆಯುತ್ತವೆ.

ವಿಭೂತಿನಾಥ:—ಏನಯ್ಯಾ ಶಿವಾನಂದ ಪಶುಗಳಿಗೆ ಉಪಯೋಗಿಸುವ ಸಲಾಕೆಗಳಿಂದ ಕೀಲು ಕೀಲಿಗೂ ಬರೆಯನ್ನೆಳೆದಾಗ್ಯೂ ಸೈರಿಸಿಕೊಂಡು ಸುಮ್ಮನಿರಬೇಕಾದರೆ ಸಾಮಾನ್ಯವಾಯಿತೇ? ಎಲ್ಲ, ನಿನ್ನ ಕೆನ್ನೆಗೆ ಬಿಗಿಯಾಗಿ ಒಂದೇ ಒಂದು ಏಟನ್ನು ಕೊಡುತ್ತೇನೆ ಸಹಿಸಿಕೋ ನೋಡೋಣ (ಹೊಡೆಯಲು ಕೈಯೆತ್ತುವನು)

ಪ್ರಣವ:—ಅಯ್ಯೋ ವಿಭೂತಿನಾಥ ಇದೇನು ವಿಪರೀತ. ಜಗತ್ಪ್ರಭುವು ಇಕ್ಕದ ಮಾರನಿಗೆ ಬರೆಯನ್ನೆಳೆದರೆ ನೀನು ಶಿವಾನಂದನ ಕೆನ್ನೆಗೆ ಹೊಡೆಯಬೇಕೆ? ಬಹಳ ಚೆನ್ನಾಯಿತು ಯಾರಾದರೂ ಕೇಳಿದರೆ ನಕ್ಕಾರು ಸುಮ್ಮನಿರು.

ವಿಭೂತಿ:—ಅದಕ್ಕಲ್ಲವಯ್ಯಾ ಪ್ರಣವ. ನಮ್ಮ ಮಿತ್ರನಿಗೆ ಶಿಕ್ಷೆಯ ರುಚಿಯನ್ನು ಅನುಭವ ಮಾಡಿಕೊಡೋಣವೆಂದು ಹಾಗೆ ಹೇಳಿದೆ ಅಷ್ಟೇ ಅಲ್ಲದೆ ಪಾಪ! ಅವನ ಮೇಲೆ ನನಗೇನು ಹೊಟ್ಟೆಯುರಿ?

ಶಿವಾನಂದ:—ಒಳ್ಳೆಯ ಮಿತ್ರನಯ್ಯಾ. ಒಳ್ಳೆಯ ಅನುಭವವನ್ನೇ ನನಗೂ ಉಂಟು ಮಾಡಿ ಕೊಡುತ್ತೀಯೆ. ಇಕ್ಕದ ಮಾರನೇನೋ ತಾನು ಮಾಡಿದ ತಪ್ಪಿಗಾಗಿ ಶಿಕ್ಷೆಯನ್ನನುಭವಿಸಿದ್ದು ಸಹಜ. ನನಗೇಕೆ ಈ ಒದೆಗಡುಬಿನ ರುಚಿ?

ಗುಹಾನಂದ:—ಅದೇನಯ್ಯಾ ಇಕ್ಕದ ಮಾರನು ಮಾಡಿದ ಅಪರಾಧ? ಅವನು ಮಹಾ ಪವಿತ್ರನೆಂದು ಸ್ವಾಮಿಯೇ ಹೇಳಲಿಲ್ಲವೇ?

ಶಿವಾನಂಧ:—ಸ್ವಾಮಿಗೆ ಒಂದು ಸೇರು ನವಣೆಯನ್ನು ಕೊಡುತ್ತೇನೆಂದು ವಾಗ್ದಾನ ಮಾಡಿ ಅದರಂತೆ ಕೊಟ್ಟು ಬಿಡದೆ, ಈರೀತಿ ಅಲ್ಲಿಂದಿಲ್ಲಿಗೆ ಇಷ್ಟು ಕಾಲವೂ ಅಲೆದಾಡುತ್ತಿರುವುದಕ್ಕಿಂತಲೂ ಅವನು ಬೇರೆ ದೊಡ್ಡ ತಪ್ಪನ್ನೇನು ಮಾಡಬೇಕು? ಅದಕ್ಕಾಗಿಯೇ ಅವನಿಗಿಂತಹ ಕಠೋರ ಶಿಕ್ಷೆ.

ವಿಭೂತಿ:—ಅಯ್ಯಾ ಶಿಕ್ಷೆಯು ಇಕ್ಕದ ಮಾರನಿಗೊಬ್ಬನಿಗೇ ಅಲ್ಲ, ಪ್ರಭುವಿಗೂ ಸಹ.

ಗುಹಾನಂದ:—ಇದೀಗ ನಿಜವಾಗಿಯೂ ಆಶ್ಚರ್ಯದ ಮಾತು. ಸ್ವಾಮಿಗೆ ಶಿಕ್ಷೆ ಹೇಗೆ?

ವಿಭೂತಿ:—ಒಂದು ಸೇರು ನವಣೆಗಾಗಿ ಈರೀತಿ ವಿರಾಮವೇ ಇಲ್ಲದೆ ಅಲೆದಾಡುತ್ತಿರುವುದು ಶಿಕ್ಷೆಯಲ್ಲವೋ?

ಶಿವಾನಂದ:—ಇಕ್ಕದಮಾರನಿಗೇನೋ ನವಣೆಯನ್ನು ಕೊಡದೆ ಇದ್ದ ತಪ್ಪಿಗಾಗಿ ಶಿಕ್ಷೆಯಾಯಿತು. ಆದರೆ ಸ್ವಾಮಿಗೇಕೆ?

ವಿಭೂತಿ:—ಸ್ವಾಮಿಯು ಮಾಡಿದ ತಪ್ಪೇನೆಂದು ಕೇಳುವೆಯೋ ಹೇಳುತ್ತೇನೆ ಕೇಳು. ಅರಣ್ಯದಲ್ಲಿದ್ದುಕೊಂಡು ತನ್ನ ಪಾಡಿಗೆ ತಾನು ಹಾಯಾಗಿ ಶಿವಧ್ಯಾನ ರತನಾಗಿ ವ್ರತಾಚರಣೆ ಮಾಡಿಕೊಂಡಿದ್ದ ಇಕ್ಕದ ಮಾರನನ್ನು ನಿಷ್ಕಾರಣವಾಗಿ ಕೆಣಕಿ ಅವನನ್ನು ಅಲ್ಲದ ಸಲ್ಲದ ಕಷ್ಟಗಳಿಗೆ ಗುರಿಪಡಿಸಿದ್ದು ತಪ್ಪಲ್ಲವೋ? ಸ್ವಾಮಿಯು ನಮ್ಮವನಾದರೇನು? ನನಗೇನೋ ನ್ಯಾಯದಲ್ಲಿಯೇ ಪಕ್ಷಪಾತ. ಏನಯ್ಯಾ ಪ್ರಣವ ನೀನೇನು ಹೇಳುವೆ?

ಪ್ರಣವ:—ಅಯ್ಯಾ ಇದರಲ್ಲಿ ಯಾರದೂ ತಪ್ಪಿಲ್ಲ, ಯಾರಿಗೂ ಶಿಕ್ಷೆಯಿಲ್ಲ.

ಎಲ್ಲರೂ:—ಇದೀಗ ಆಶ್ಚರ್ಯದ ಪರಮಾವಧಿ. ಅದು ಹೇಗೆ ಹೇಳು.

ಪ್ರಣವ:—ಹೇಳುತ್ತೇನೆ ಕೇಳಿ. ಇಕ್ಕದ ಮಾರನೆಂಬ ಜೀವಾತ್ಮನು ತನ್ನ ಭಕ್ತಿ ವಿಶೇಷದಿಂದ ಮುಕ್ತಿಯನ್ನು ಹೊಂದಬೇಕಾಯಿತು. ಅದಕ್ಕಾಗಿ ಶಿವರೂಪಿಯಾದ ಪರಮಾತ್ಮನು, ಅವನಿಗೆ ದರ್ಶನವನ್ನು ಕೊಡಬೇಕಾಯಿತು. ಈ ದರ್ಶನ ಯೋಗವು ಘಟಿಸಲು ನಾರದ ರೂಪಿಯಾದ ಆತ್ಮ ಜ್ಞಾನವು ಪ್ರೇರಿಸಿತು. ಅನಂತರ 'ಯಸ್ಯಾನುಗ್ರಹಮಿಚ್ಛಾಮಿ ತಸ್ಯವಿತ್ತಂ ಹರಾಮ್ಯಹಂ' ಎಂಬ ಭಗವದ್ವಾಕ್ಯದಂತೆ ನಿಜ ಭಕ್ತನ ವಿತ್ತ ಎಂದರೆ ಹೊರಗೆ ತೋರುವ ಧನ, ಧಾನ್ಯ, ಐಶ್ವರ್ಯ, ದೇಹಾದಿಗಳು, ಮತ್ತು ಆಂತರ್ಯ ವಿತ್ತಗಳಾದ ಮನಸ್ಸು, ಪ್ರಾಣ, ಇಂದ್ರಿಯಗಳೇ ಮೊದಲಾದ ಸರ್ವಸ್ವವನ್ನೂ ಸೆಳೆಯಬೇಕಾಯಿತು. ಇವುಗಳಲ್ಲೆಲ್ಲಾ, ಅತ್ಯಂತ ಪ್ರಾಮುಖ್ಯವಾದ ಮನಸ್ಸನ್ನು ಪ್ರಭುವು ಮೊದಲು ಸೆಳೆದು ಬಿಟ್ಟು ಈಗ ಗೌಣವಾದ

ಬಾಹ್ಯವಿತ್ತಗಳನ್ನು ಸೆಳೆಯಲು ಉದ್ದೇಶಿಸಿದ್ದಾನೆ. ಅದಕ್ಕಾಗಿಯೇ ನಾವೆಲ್ಲರೂ ಜಂಗಮ ವೇಷಗಳನ್ನಳವಡಿಸಿಕೊಂಡು ಶಿಷ್ಯರಂತೆ ಬರಲು ಅಜ್ಞಾಪಿಸಿದ್ದಾನೆ. ಇದನ್ನರಿಯದೆ ನಾವು ದೊಡ್ಡವರ ಗುಣ ದೋಷಗಳನ್ನು ವಿಮರ್ಶೆ ಮಾಡುತ್ತಾ ಇಲ್ಲಿ ಕಾಲಹರಣ ಮಾಡುತ್ತಿರುವುದು ಸರಿಯಲ್ಲ ನಡಿಯಿರಿ, ಬೇಗ ಹೋಗೋಣ.

ಎಲ್ಲರೂ :—ಹಾಗೆಯೇ ಆಗಲಿ. (ಹೋಗುವರು)

## ೪ನೇ ಪ್ರವೇಶ

(ಕೈಲಾಸ. ಪ್ರವೇಶ-ಈಶ್ವರ, ಪಾರ್ವತಿ, ನಾರದ)

ಪಾರ್ವತಿ :—ನಾಥ, ನಾರದನ ಮಾತೇ ನಿಜವಾಯಿತು. ಕಡೆಗೂ ತಾವೇ ಸೋತಿರಿ.

ನಾರದ :—ಅಂಬಾ, ನಾನು ಮೊದಲೇ ಹೇಳಲಿಲ್ಲವೆ ? ಈ ಶಂಕರನೇ ಸೋಲುವನೆಂದು. ಯಾವ ಭಕ್ತರ ಮುಂದೆ ತಾನೇ ಈ ಪ್ರಭುವಿನ ಪ್ರತಾಪವು ಸಾಗಿದೆ ಹೇಳು.

ಈಶ್ವರ :—ದಾಕ್ಷಾಯಿಣಿ, ಬ್ರಹ್ಮಪುತ್ರ, ಸುಮ್ಮನೆ ವಿನೋದ ಮಾಡಬೇಡಿ. ನಾನಾಗಲೇ ಸೋತಂತೆಯೇ ನಿರ್ಧರಿಸಿಬಿಟ್ಟಿರಾ? ಅದು ಹೇಗೆಂಬುದನ್ನು ಸ್ವಲ್ಪ ಹೇಳಿ ಕೇಳೋಣ.

ಪಾರ್ವತಿ :—ನಾಥ, ಇನ್ನೇನಾಗಬೇಕು ! ಮಾರನು ತಮಗೆ ಭಿಕ್ಷವನ್ನು ಕೊಟ್ಟನೆ ? ಅವನಿಂದ ಭಿಕ್ಷವನ್ನು ತರುವುದು ಸಾಧ್ಯವಿಲ್ಲವೆಂದು ತಾವೇ ಹೇಳಲಿಲ್ಲವೇ? ಸೋಲುವುದೆಂದರೆ ಇನ್ನು ಹೇಗೆ ?

ನಾರದ :—ಜನನಿ, ಸೋಲುವುದೆಂದರೆ ಇನ್ನೂ ಇಷ್ಟೇ ಅಲ್ಲ. ಮೂಗನ್ನು ನೆಲದಮೇಲುಜ್ಜಿ 'ಅಪ್ಪಾ, ಮಾರಭಕ್ತ ನಾನೇ ಸೋತೆನಯ್ಯಾ' ಎಂದು ಬಾಯಿಂದ ಹೇಳಿದರೇನೇ ಸೋಲು. ಮಲ್ಲಯುದ್ಧದಲ್ಲಿ ಎಷ್ಟುಸಾರೆ ಕೆಳಗೆ ಬಿದ್ದರೇನು ? ಮೀಸೆಗೆ ಮಣ್ಣುಹತ್ತಿದರಲ್ಲವೇ ಅಪಜಯ ?

ಪಾರ್ವತಿ :—( ನಗುತ್ತಾ ) ನಾರದ ನೀನೆಂತಹ ಕಿಡಿಗೇಡಿ. ಹೀಗೆ ಮರ್ಮಸ್ಪೃಕ್ಕಾದ ಮಾತುಗಳನ್ನಾಡುವರೇ ? ಪಾಪ! ಪ್ರಭುವು ಮಾರಭಕ್ತನಮೇಲೆ ದಯೆಯಿಂದ ಈವರೆಗೂ ಸುಮ್ಮನಿರುವರೇ ಹೊರತು ಇಲ್ಲದಿದ್ದರೆ ಇಷ್ಟುಹೊತ್ತಿಗೇ....

ನಾರದ:—ಏನು ! ಇಷ್ಟುಹೊತ್ತಿಗೇನಾಗುತ್ತಿತ್ತು ?

ಪಾರ್ವತಿ:—ಆಗುವುದೇನು ? ತಂದೇಬಿಡುತ್ತಿದ್ದರು.

ನಾರದ:—ಏನನ್ನು ? ಭಿಕ್ಷವನ್ನು ತರಲಾಗುವುದಿಲ್ಲವೆಂಬ ಆನಂದಕರವಾದ ಸುದ್ದಿಯನ್ನು ಅಲ್ಲವೆ. ಅಂಬಾ! ಈಗಲೂ ಅದನ್ನು ತಂದೇ ಇದ್ದಾನೆಯಲ್ಲಾ.

ಈಶ್ವರ:—ನಾರದ, ನೀವು ವಿವೇಚನೆಯಿಲ್ಲದೆ ಹಾಸ್ಯ ಮಾಡಿದರೆ ನನಗೇನೂ ಇಷ್ಟವಿಲ್ಲ. ಅಯ್ಯಾ ಇಕ್ಕದ ಮಾರನ ಸರ್ವಸ್ವವನ್ನೂ ತರಬೇಕೆಂದಲ್ಲವೇ ಈಗ ನಾವು ಹೋಗುತ್ತಿರುವುದು ? ಒಂದು ಸೇರು ನವಣೆಗೆ ಬದಲಾಗಿ ಅವನಲ್ಲಿರುವ ಧನ ಧಾನ್ಯಾದಿಗಳೆಲ್ಲಾ ನಮಗೆ ಸಿಕ್ಕುವುದಾದರೆ ನನ್ನ ಪ್ರತಿಜ್ಞೆ ನೆರವೇರಲಿಲ್ಲವೇ ? ನೀವು ಇದಾವುದನ್ನೂ ಯೋಚಿಸದೆ ವ್ಯರ್ಥಾ ನನ್ನನ್ನು ಹಾಸ್ಯ ಮಾಡಿ ನಗುತ್ತಿದ್ದೀರಿ. ಇದು ನಿಮಗೆ ಸರ್ವಥಾ ಯೋಗ್ಯವಾದದ್ದಲ್ಲ.

ನಾರದ:—ದೇವ ನೀನು ಹೇಳುವುದು ಬಹಳ ಚೆನ್ನಾಗಿದೆ.

ಕಂದ|| ದಾರಿಗರಂ ತಲೆವೊಯ್ದಾ
ಚೋರರು ತಪ್ಪನವಂ ಸೆಳೆದು ಗೆಲಿಸಿದೆವೆನುತಂ ||
ಪೌರುಷಮಂ ಮೆರೆವೆಂದಡೆ |
ಮಾರನ ಸಿರಿಯಂ ತುಡುಂಕೆ ಕೃತಿಸೀನೆಂತೈ ||

ಈಶ್ವರ :—ಏಕೆ. ನಿನ್ನನುಮಾನವೇನೆಂಬುದೇ ನನಗೆ ತಿಳಿಯದಲ್ಲಾ. ಅವನಿಂದ ಏನನ್ನಾದರೂ ತರಬೇಕಾದುದೇ ಅಲ್ಲವೇ ನನ್ನ ಪ್ರತಿಜ್ಞೆ ?

ಪಾರ್ವತಿ :—ಹೌದು. ಹೌದು. ಇಷ್ಟೇ ತಾನೇ.

ನಾರದ:—ಅಂಬಾ, ನೀವಿಬ್ಬರೂ ಸತಿಪತಿಗಳೊಂದಾಗುವುದು ಸಹಜವೇ ಸರಿ. ಆದರೆ, ಜಗಜ್ಜನನಿ, ಪ್ರಭುವಿನ ಅನುಜ್ಞೆಯೇನು ಜ್ಞಾಪಕವಿದೆಯೇ ? ಅವನ ಕೈಯಿಂದಲೇ ಭಿಕ್ಷವನ್ನು ತರಬೇಕೆಂದಲ್ಲವೆ ! ಅವನು ಕೈಯೆತ್ತಿ ಕೊಡದೆ ಇದ್ದಮೇಲೆ ಅವನ ಐಶ್ವರ್ಯವನ್ನೆಲ್ಲಾ ಹೊತ್ತುಕೊಂಡು ಬಂದರೂ ಸ್ವಾಮಿಯ ಪ್ರತಿಜ್ಞೆ ನೆರವೇರಿದಂತಾಯಿತೆ ? ಅಥವಾ ಅವನ ವ್ರತಕ್ಕೇನಾದರೂ ಲೋಪ ಬಂತೆ? ಯಾರು ಗೆದ್ದವನು ಯಾರು ಸೋತವರೆಂಬುದನ್ನು ಈಗ ನೀನೇ ನಿರ್ಣಯಿಸಬಹುದು.

ಪಾರ್ವತಿ :—ನಿಜ ನಿಜ. ನಾಥ, ತಾವೇ ನೋಡಿರಿ. ಇಕ್ಕದ ಮಾರನೇ ದೊಡ್ಡವನು.

ಈಶ್ವರ :—ಆಗಲಿ. ಇಕ್ಕದ ಮಾರನೇ ಗೆಲ್ಲಲಿ. ನಾನೇ ಸೋಲಲಿ. ಅವನಂತಹ ಭಕ್ತಶ್ರೇಷ್ಠರ ಪ್ರತಿಜ್ಞೆಗಳನ್ನು ನೆರವೇರಿಸಲು ನಾನು ಸಹಸ್ರ ಸಹಸ್ರ ಬಾರಿಯಾದರೂ ಸೋಲನ್ನೊಪ್ಪಿಕೊಳ್ಳುವೆನು. ಏಕೆಂದರೆ :—

ಕಂದ|| ವರ ಗುಣಗಣದಿಂ ಶಿಷ್ಯಂ |
ಗುರುವಂಮೀರಿದೊಡೆ ಮೇಣ್ ಮಹೋನ್ನತಿಯಿಂದಂ
ತರಳನು ಪಿತನಂ ಗೆಲಲಾ |
ಗುರುಪಿತರಿಂಗದುವೆ ಪರಮ ಭೂಷಣಮಲ್ತೇ ||

ಹಾಗೆಯೇ ಭಕ್ತರ ವ್ರತ ಪ್ರತಿಜ್ಞೆಗಳಿಗೆ ಕಟ್ಟುಬೀಳುವುದು ನನಗೆ ಗೌರವ ಯೋಗ್ಯವು. ಮತ್ತು ಅಧಿಕ ಕೀರ್ತಿಪ್ರದವು. ಈ ಪ್ರತಿಜ್ಞಾ ಭಂಗಕ್ಕಾಗಿ ನಾನು ಸಂತೋಷಿಸುವೆನೇ

ಹೊರತು ಸ್ವಲ್ಪವೂ ಅಸಮಾಧಾನ ಪಡಲಾರೆನು. ನಾರದ, ಈ ದೇವಭಕ್ತ ಸಂಘಟನೆಗಾಗಿ ನಿನ್ನನ್ನೂ, ಇದರ ಪ್ರೋತ್ಸಾಹಕ್ಕಾಗಿ ಪಾರ್ವತಿಯನ್ನೂ ನಾನು ಮನಸಾರೆ ಅಭಿನಂದಿಸುವೆನು. ಬನ್ನಿ ಹೋಗಿ ಮುಂದಿನ ಕಾರ್ಯಗಳನ್ನು ನೋಡೋಣ.

ನಾರದ :—ದೇವ, ನಾನಾಡಿದ ವಿನೋದದ ನುಡಿಗಳಿಗಾಗಿ ಕೋಪವಿಲ್ಲವಷ್ಟೆ ?

ಪಾರ್ವತಿ :—ನಾಥ, ನಾನೂ ಸಹ ಈ ವಿಷಯದಲ್ಲಿ ಅಪರಾಧಿ.

ಈಶ್ವರ :—ದೇವೀ, ನೀವಿಬ್ಬರೂ ಅಪರಾಧಿಗಳಲ್ಲ. ನನಗೆ ಸಹಾಯಕರು. ವಿನೋದದ ನುಡಿಗಳಿಗೆ ಕೋಪವೆಂತು ಬಂದೀತು ? ಬನ್ನಿ, ಬೇಗ ಹೋಗೋಣ. ಪಾಪರಹಿತನಾದ ಭಕ್ತನನ್ನನುಗ್ರಹಿಸಿ ನಮ್ಮ ಸನ್ನಿಧಿಗೆ ಕರೆದುಕೊಳ್ಳೋಣ.

ನಾ. ಪಾ. :—ಅಪ್ಪಣೆಯಂತಾಗಲಿ. (ಹೋಗುವರು)

### ೫ ನೇ ಪ್ರವೇಶ

(ಇಕ್ಕಡ ಮಾರನು ಮುಸುಕಿಟ್ಟು ಮಲಗಿರುವನು. ಮಾರಿಯು ಪಾರ್ಶ್ವದಲ್ಲಿ ಕುಳಿತಿರುವಳು.)

ಮಾರಿ :—ವೃತ್ತ||

ಅಮಮಾ ಜಂಗಮರೂಪಿನಿಂ ಗಿರಿಶತಾನೆಮ್ಮಾರ್ಶ್ವರೊಳ್
ಯಾಚನಾ | ಭ್ರಮೆಯಿಂ ತೋರಿನೆಗಳ್ಚಿದಾಬಿನದ ಮಾ
ದೇವಂಗ ಮಾರ್ಗಂ ಪ್ರಿಯಂ || ಸುಮಹದ್ಭೀಷಣ ರೋ
ಮಹರ್ಷಣಕರಂ ಕಾಲೋಗ್ರ ಹಿಂಸಾಪ್ರಭಂ | ಭ್ರಮ
ರಾಂಬಾ ರಮಣಂಗದೆಂತು ಮನಮೊಪ್ಪಿತ್ತೀ ಶಿಖಿಪ್ರಕ್ರಿ
ಯಂ ||

ಹಾಯ್ ಹಾಯ್, ಪರಮಾತ್ಮಾ, ಇದೆಂತಹ ಯಾತನೆ. ಇದಾವ ಪಾಪದ ಶಿಕ್ಷೆ, ಭಕ್ತರಕ್ಷಕನಾದ ದೇವದೇವನೇ ಭಕ್ತ ಶಿಕ್ಷಕನಾಗುವುದಂತಹ ವಿಚಿತ್ರ. ಅಯ್ಯೋ ! ಈ ಶಿಕ್ಷೆಯನ್ನು ನೋಡುವುದಂತಿರಲಿ. ಸ್ಮರಿಸುವುದೂ ಕೂಡ ಭಯಂಕರವಾಗಿರುವಲ್ಲಿ, ಅನುಭವಿಸುವವರ ಪಾಡೇನಾಗಿರಬಹುದು. ಸ್ವಾಮಿಯ ಕರುಣಾ ಪ್ರದರ್ಶನದ ರೀತಿಯು ಇದೇ ಆಗಿದ್ದಲ್ಲಿ ಆತನನ್ನು ದಯಾಮಯನೆಂದು ಕಣ್ಣು ಕಾಣದವರು ಹೊಗಳಬೇಕು. ಹೇ ಜಗನ್ನಾಥ ನಮ್ಮಲ್ಲೇಕೆ ಇಷ್ಟು ಕಠೋರ ಹೃದಯನಾದೆ. (ಮಾರನ ಮುಸುಕನ್ನು ತೆಗೆದು) ಪ್ರಾಣೇಶ, ಎಚ್ಚತ್ತಿರುವೆಯಾ ?

ಮಾರ :—ಸಖಿ, ಮುಸುಕನ್ನು ತೆರೆಯಬೇಡ, ಸುಮ್ಮನಿರು.

ಮಾರಿ :—ಅದೇಕೆ ಹೀಗೆ ಹೇಳುವೆ ?

ಮಾರ :—ಏಕೆಂದು ಕೇಳುವೆಯಲ್ಲಾ, ನನ್ನ ಧ್ವನಿಯು ಕಿವಿಗೆ ಬಿದ್ದಕೂಡಲೇ ಜಂಗಮಯ್ಯನವರು ಸೇರು ನವಣೆಯನ್ನು ಕೊಡೆಂದು ಪೀಡಿಸುವರು. ಆಗೇನು ಮಾಡುವೆ ?

ಮಾರಿ :—ಜಂಗಮಯ್ಯನವರು ಹೊರಟುಹೋದರು. ಅಯ್ಯೋ ಹಾಳಾದ ಒಂದು ಸೇರು ನವಣೆಗಾಗಿ ಇಂಥಾ ಯಮ ಯಾತನೆಯನ್ನು ಹೇಗೆ ಸಹಿಸಿದೆ ?

ಮಾರ :—ಏನು ? ಯಾತನೆಯಾವುದು ? ಅನುಭವಿಸಿದವರಾರು ? ನಿನ್ನ ಮುಖವೇಕೆ ಕಂದಿರುವುದು ?

ಮಾರಿ :—ಇದೇನು ! ಹೀಗೆ ಕೇಳುವೆ ! ನಿನ್ನ ಅಂಗಾಂಗಗಳಿಗೂ ಬರೆಗಳೆಳೆದದ್ದೇ ನಿನಗೆ ತಿಳಿಯದ ? ಶಿವಶಿವಾ, ಹೃದಯ ವಿದೀರ್ಣಕರವಾದ ಆ ನೋಟವು ನೆನಪಿಗೆ ಬಂದರೆ ಈಗಲೂ ನನ್ನ ಮೈಯೆಲ್ಲವೂ ಕಂಪಿಸುವುದು.

ಮಾರ :—ಏನು ! ಬರೆಗಳೇ ! ಎಳೆದವರಾರು ?

ಮಾರಿ :—ಇದೇನಾಶ್ಚರ್ಯ ! ಹೀಗೆ ಕೇಳುವೆ ? ನಿನಗೇನೇ ಜಂಗಮರೂಪಿಯಾದಾ ಪರಶಿವನು ಅಂಗಾಂಗಗಳಿಗೂ ಎಳೆಯಲಿಲ್ಲವೆ ?

ಮಾರ :—(ಸ್ಮರಣೆಯನ್ನಭಿನಯಿಸಿ) ಓಹೋ ! ಈಗ ನೆನಪಿಗೆ ಬಂತು. ಅದನ್ನು ನೆನೆದರೆ ಈಗಲೂ ಆನಂದದಿಂದ ಮೈಯುಬ್ಬುವುದು. ಸಖಿ, ಅಂಥಾ ಸುಖವು ಈ ಜನ್ಮದಲ್ಲಿ ಮತ್ತೆ ದೊರೆಕೀತೆ ?

ಮಾರಿ :—ನಾಥ, ಇದು ಹಾಸ್ಯಕ್ಕೆ ಸಮಯವೆ ? ಕೈಲಾದರೆ ಮೆಲ್ಲನೆ ಎದ್ದು ಕುಳಿತುಕೋ. ಇಲ್ಲದಿದ್ದರೆ ಹಾಗೆಯೇ ಮಲಗಿರು. ಗಾಯಗಳಿಗೆಲ್ಲಾ ವನಸ್ಪತಿ ರಸಗಳನ್ನು ಲೇಪನ ಮಾಡುವೆನು. ನೋವು ಕಡಮೆಯಾಗುವುದು.

ಮಾರ :—ನೋವು ಇದ್ದರೆ ತಾನೇ ಕಡಮೆಯಾಗುವುದು. ನೀನು ನೋಡಿದ ಗಾಯಗಳೆಲ್ಲವೂ ಭಗವಂತನ ಅಪಾರವಾದ ಕರುಣೆಯ ಬಾಹ್ಯ ಚಿಹ್ನೆಗಳು. ಅವುಗಳಲ್ಲಿ ಆನಂದವಲ್ಲದೆ ನೋವು ತುಂಬಲಾರದು.

ಮಾರಿ :—ಪ್ರಭು, ನನಗೆ ವ್ಯಥೆಯಾಗುವುದೆಂದು ಈ ರೀತಿ ನೋವಿಲ್ಲದಂತೆ ನಟಿಸುತ್ತಿರುವೆಯಲ್ಲವೇ? ಇದರಿಂದ ನಿನ್ನ ದಾಕ್ಷಿಣ್ಯ ಪ್ರಕೃತಿಯು ವ್ಯಕ್ತವಾಗುವುದು. ಇರಲಿ, ಏಳು, ಔಷಧಿಯನ್ನು ಲೇಪಿಸುತ್ತೇನೆ.

ಮಾರ :—ಸಖಿ, ಗಾಯಗಳೇ ಇಲ್ಲದಮೇಲೆ ಔಷಧವೇತಕ್ಕೆ ನನ್ನ ದೇಹ ಪಾದ್ಯಂತದಲ್ಲೂ ಗಾಯದ ಒಂದು ಗುರುತೂ ಕೂಡಾ ಇಲ್ಲವಲ್ಲಾ. ವೃಥಾ ಏಕೆ ಹಂಬಲಿಸುತ್ತಿರುವೆ. ನೋಡು. (ಹೊದಿಕೆಯನ್ನು ತೆಗೆಯುವನು)

ಮಾರಿ :—(ನೋಡಿ) ಆಶ್ಚರ್ಯ, ಪರಮಾಶ್ಚರ್ಯ. ನಾಥ, ನಾನೇನು ಎಚ್ಚತ್ತಿರುವೆನೋ ಅಥವಾ ಸ್ವಪ್ನವನ್ನು ನೋಡುತ್ತಿರುವೆನೋ ತಿಳಿಯುದಲ್ಲಾ. ನನ್ನ ಕಣ್ಣುಗಳೇ ನನಗೆ ಮೋಸಮಾಡಿರಬಹುದೋ ! ಬರೆಯೆಳೆದದ್ದರಿಂದ ಮೇಲಿನ ಚರ್ಮವು ಸುಟ್ಟು ಭುಸ್ಸೆಂದು ಹೊಗೆ ಏಳಲು ನೋಡಲಾರದೆ ದುಃಖಭರದಿಂದ ಮೂರ್ಛೆಗೊಂಡ ನಾನು ಪುನಃ ಎಚ್ಚತ್ತುಕೊಳ್ಳುವಷ್ಟರಲ್ಲಿಯೆ ಅದರ ಗುರುತು ಕೂಡ ಕಾಣದಂತಾಗಿರುವುದೆಂತಹ ಸೋಜಿಗ. ಇದೇನು ಮತಿ ಭ್ರಮೆಯೋ, ಮಾಯೆಯೋ, ಇಂದ್ರಜಾಲವೋ ತಿಳಿಯಲಾರದವಳಾಗಿದ್ದೇನೆ. ನಾಥ, ಇದರ ನಿಜಾಂಶವೇನು. ದಯವಿಟ್ಟು ತಿಳಿಸಿ ನನ್ನ ಸಂಶಯವನ್ನು ಹೋಗಲಾಡಿಸುವೆಯಾ ?

ಮಾರ —ಸಖಿ, ಭಕ್ತಾರ್ತಿಭಂಜನನಾದ ಭಗವಂತನ ಸ್ಪರ್ಶ ದರ್ಶನಗಳಾದವರಿಗೆ ಈ ನಶ್ವರ ಪ್ರಂಪಂಚದ ಅಲ್ಪ ಶಿಕ್ಷೆಗಳೇನು ಮಾಡಿಯಾವು? ಮಹಾನುಭಾವನಾದಾ ಚಂದ್ರಮೌಳಿಯು ನನ್ನ ಕೈಗಳನ್ನು ಹಿಡಿದುಕೊಳ್ಳುತ್ತಲೇ ಏನೋ ಒಂದು ಅನಿರ್ವಚನೀಯವಾದ ಆನಂದಲಹರಿಯು ನನ್ನ ಹೃದಯಾಬ್ಧಿ ಮಧ್ಯದಲ್ಲಿ ತರಂಗ ತರಂಗವಾಗಿ ಜನಿಸಲು, ಬಾಹ್ಯ ಜ್ಞಾನವು ಸಂಪೂರ್ಣವಾಗಿಯೂ ಲೋಪವಾಯಿತು. ಅನಂತರ ಅದಾವುದೋ ಒಂದು ಜ್ಯೋತಿರ್ಮಯ ಪ್ರಪಂಚಕ್ಕೆ ಹೋದಂತಾಯಿತು. ಅಲ್ಲಿನ ದಿವ್ಯ ಪ್ರಭೆಯ ಸೊಬಗನ್ನು ವರ್ಣಿಸುವುದಸಾಧ್ಯ. ದೇವದೇವನಾದಾ ಮಹಾದೇವನು ಅಲ್ಲಿದ್ದವನು ನನ್ನನ್ನು ತನ್ನ ಕರುಣಾಕಟಾಕ್ಷದಿಂದೀಕ್ಷಿಸಿ, ನನ್ನ ಅಂಗಾಂಗಗಳಲ್ಲಿಯೂ ಸರ್ವ ಸುಖದಾಯಕವಾದ ಅಮೃತ ರಸದಿಂದ ಸೇಚನೆಮಾಡಿ ಅದರಿಂದೆನಗುಂಟಾದ ದಿವ್ಯಾನಂದ ಸುಖಗಳನ್ನು ನೋಡಿ ವಾತ್ಸಲ್ಯ ಪೂರಿತಾಂತರಂಗನಾಗಿ ಅಲ್ಪವಾದ ಮಂದಹಾಸವನ್ನು ಬೀರುತ್ತಿದ್ದಂತೆ ತೋರಿತು ನನ್ನನ್ನೇ ನಾನು ಮರೆತಿದ್ದೆನು. ನೀನೀಗ ಎಚ್ಚರಗೊಳಿಸಲು ಕಣ್ದೆರೆದು ಈ ಪ್ರಪಂಚದರಿವನ್ನು ಹೊಂದಿದೆನು ಇದೀಗ ನಿಜಾಂಶ. ಇದೆಲ್ಲವೂ ಮಹಾಮಹಿಮನ ಲೀಲಾವಿನೋದ. ಇದರ ಮರ್ಮವು ಇನ್ನೂ ನನಗೇ ತಿಳಿದಿಲ್ಲ. ಪಾಪ ! ನೀನರಿವುದೆಂತು ? ಅದ್ದರಿಂದಲೇ ನೀನು ಭಯಾರ್ತೆಯಾಗಿ ಮರುಗಿದುದು ಸ್ವಭಾವವೇ ಆಗಿದೆ.

ಮಾರಿ :—ನಾಥ, ನಿನ್ನ ಮಾತಿನಿಂದ ನನ್ನ ಸಂದೇಹವು ಪೂರ್ಣವಾಗಿ ಪರಿಹಾರವಾಗಲಿಲ್ಲ. ನಿನ್ನ ದೇಹಕ್ಕೆ ಬರೆಯೆಳೆದದ್ದನ್ನು ನಾನು ಈ ಕಣ್ಣಿನಿಂದಲೇ ನೋಡಿದ್ದೇನೆ. ಆದರೂ ಚರ್ಮವು ಸುಡದೆ ಗುರುತು ಸಹ ಇಲ್ಲದಂತಾದ್ದು ಹೇಗೆ ?

ಮಾರ :—ಪ್ರಾಣೇಶ್ವರಿ, ಭಗವಂತನಲ್ಲಿ ನಿಜವಾದ ಭಕ್ತಿಯುಳ್ಳವರಿಗೆ ಯಾವ ಶಿಕ್ಷೆಯೂ ನಾಟುವುದಿಲ್ಲ. ಆಂಜನೇಯನ ಬಾಲಕ್ಕೆ ಹತ್ತಿಸಿದ ಬೆಂಕಿಯು ಆತನಿಗೇನಾದರೂ ತೊಂದರೆ ಪಡಿಸಲಾಯಿತೆ ? ಭಕ್ತಶ್ರೇಷ್ಠನಾದ ಸುಧನ್ವನನ್ನು ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿ ಕುದಿಸಿದರೂ ಅವನ ರೋಮಕ್ಕಾದರೂ ಗಾಸಿಯಾಯಿತೆ. ಇಂತಹ ಸಾವಿರಾರು ಉದಾಹರಣೆಗಳನ್ನು ಕೊಡಬಹುದು. ಭಗವಾನ್ ಚಂದ್ರಮೌಳಿಯ ಅನುಗ್ರಹದಿಂದ ಅಗ್ನಿ ಸಂಪರ್ಕವೂ ನನಗೆ ಸುಖಕರವೇ ಆಯಿತು.

ಮಾರಿ :—ಆದರೂ ಪ್ರಭು, ಎಂತಹ ವಿಚಿತ್ರ ವ್ಯಾಪಾರವಿದು. ಅಯ್ಯೋ ಅಗ್ನಿ ಸ್ಪರ್ಶವನ್ನು ಅಮೃತ ಸೇಚನವನ್ನಾಗಿ ಪರಿವರ್ತಿಸಿದ ಮಹಾನುಭಾವನನ್ನು ಅಪ್ರಬುದ್ಧಳಾದ ನಾನು ಭಕ್ತ ಶಿಕ್ಷಕನೆಂದೂ, ಕಠೋರ ಮನಸ್ಕನೆಂದೂ ನಿಂದಿಸಿ ದೈವದ್ರೋಹಿಯಾದೆನು. ಹಾಯ್ ಹಾಯ್ ಸ್ವಾಮಿಯೇ.

ಕಂದ॥ ಕ್ಷಮಿಸುವುದೆಲೆ ಕರುಣಾಕರ |
ಕ್ಷಮಿಸೈ ಭಕ್ತಾರ್ತಿಹರಭವಾಧಿ ವಿದೂರಾ ||
ಕ್ಷಮಿಸೆನ್ನ ದೇವ ಶಂಕರ |
ಕ್ಷಮಿಸೆಲೆ ಪರಮಾತ್ಮ ಶರಣಜನ ಮಂದಾರ ॥

ಕಂದ॥ ಶರಣಾಗತೆ ನಾ ನಿನ್ನಯ |
ಚರಣ ಸರೋಜಾತಯುಗದೊಳೆನ್ನಪಕೃತಿಯಂ ॥
ಮರೆದುದ್ಧರಿಸೈ ದೀನರ ।
ಪೊರೆವಂ ನೀನಲ್ತೆ ಪರಮ ಕಾರುಣ್ಯಾಬ್ಧೀ ||

ಕಂದ|| ಒದವಿದ ಪಲಜನುಮಗಳಿಂ |
ದುದುಭವಿಸಿದ ಪಾಪಕೋಟಿಗಳ ನುರಿವುತ್ತಂ ||
ಸದಮಲ ಪೊರೆದಪೊಲೆನ್ನ |
ತ್ತಿದೊಂದುಮಂ ಮನ್ನಿಸುತ್ತೆ ಕಾಯುವುದಭವಾ ||

ದೇವ ದೇವ, ಸರ್ವ ಮಂಗಳಾರಮಣ, ಅಲಂಘ್ಯವಾದ ನಿನ್ನ ಮಾಯೆಯಿಂದಾವೃತಳಾಗಿ ಅಜ್ಞಾನದಿಂದ ನಾನಾಡಿದ ಅನ್ಯಾಯದ ನುಡಿಗಳನ್ನು ಕ್ಷಮಿಸು. ಪರಮಾತ್ಮಾ, ನಿನ್ನ ಕಠೋರ ದಯದಿಂದ ನನ್ನ ಜ್ಞಾನ ಚಕ್ಷುವು ಈಗೀಗ ವಿಕಸಿತವಾಗುತ್ತಿರುವುದು. ನನ್ನ ಪಾತಕರಾಶಿಗಳು ಹಿಂಗಿದುವು. ಭವಪಾಶಗಳು ತೊಲಗಿದುವು. ಇನ್ನು ಮುಂದೆ ಈ ನನ್ನ ದೇಹ, ಪ್ರಾಣ, ಮನಸ್ಸು ಎಲ್ಲವನ್ನೂ

ನಿನಗರ್ಪಿಸಿರುವೆನು. (ಮಾರನನ್ನುದ್ದೇಶಿಸಿ) ನಾಥ, ಏಳು ಭೋಜನಕ್ಕೆ ಹೊತ್ತಾಗಲಿಲ್ಲವೆ ?

ಮಾರ :—ಮುಗ್ಧೇ, ನಿನಗಿನ್ನೂ ಈ ಪ್ರಾಪಂಚಿಕ ಯೋಚನೆಗಳು ತಪ್ಪಲಿಲ್ಲವೇ ! ದೇವಾದಿ ದೇವನಾದ ಚಂದ್ರಮೌಳಿಯ ದಿವ್ಯಮೂರ್ತಿಯ ಸಂದರ್ಶನಾಮೃತ ಪಾನಮಾಡಿಯೂ ಈ ಅನ್ನಪಾನಗಳ ಯೋಚನೆಯು ಬಿಡದು. ಹಾಯ್, ಹಾಯ್. ಭಗವನ್ಮಾಯೆಯು ನಿಜವಾಗಿಯೂ ತಿಳಿಯಲಶಕ್ಯವಾದದ್ದು. ಇರಲಿ, ಪ್ರೇಯಸಿ ಸ್ವಲ್ಪತಾಳು, ಜಗತ್ಪ್ರಭುವು ಈಗಲೇ ಮತ್ತೆ ಬರುವನು. ಆತನ ಲೀಲೆಗಳನ್ನೆಲ್ಲಾ ಸಂಪೂರ್ಣವಾಗಿ ನೋಡಿದನಂತರ ಅವಶ್ಯಕವಾದರೆ ಭೋಜನ ಮಾಡೋಣ.

ಮಾರಿ :—ಅಪ್ಪಣೆಯಂತಾಗಲಿ. (ಮಾರನು ಮತ್ತೆ ಮುಸುಕಿಟ್ಟುಕೊಳ್ಳುವನು.)

## ೬ನೇ ಪ್ರವೇಶ.

(ಇಕ್ಕದ ಮಾರನ ಮನೆ. ಪ್ರವೇಶ. ಜಂಗಮ ವೇಷಧಾರಿಯಾದ ಈಶ್ವರ, ಪಾರ್ವತಿ, ನಾರದ ನಾಲ್ಕುಜನ ಪ್ರಮಥರು ಶಿಷ್ಯರ ವೇಷದಲ್ಲಿ.)

ಈಶ್ವರ.—ಪ್ರಮಥರೇ, ನೀವು ಮುಂದೆ ಹೋಗಿ ಅವರ ಧನಧಾನ್ಯಾದಿಗಳನ್ನೆಲ್ಲಾ ಸೂರೆಗೊಳ್ಳಿ. ನಾವೂ ಜಾಗ್ರತೆಯಾಗಿಯೇ ಬರುವೆವು.

ಪ್ರಮಥರು :—ಅಪ್ಪಣೆ. (ಹೋಗುವರು.)

ಈಶ್ವರ.—ನಾರದ, ಪಾರ್ವತಿ ನಾವೂ ಮರೆಯಲ್ಲಿ ನಿಂತು ವಿನೋದವನ್ನು ನೋಡೋಣಬನ್ನಿ. (ಮೂವರೂ ಒಂದು ಕಡೆ ಮರೆಯಾಗಿ ನಿಲ್ಲುವರು.)

(ಮಾರಿಯೆದುರಿಗೆ ಬಂದು ಪ್ರಮಥರು.)

೧ನೆ. ಪ್ರ. :—ತಾಯೀ, ಮಾರಭಕ್ತನ ಪತ್ನಿಯು ನೀನೇ ಏನಮ್ಮಾ ?

ಮಾರಿ :—ಹೌದು, ಅಯ್ಯಾ ನೀವಾರು ? ಇಲ್ಲಿಗೇಕೆಬಂದಿರಿ. ನಮ್ಮನ್ನು ಕೇಳದೆ ಒಳಗೆ ನುಗ್ಗಲು ಕಾರಣವೇನು ?

೨ನೆ. ಪ್ರ. :—ನಾವು ಗಂಗಾಧರಯ್ಯನವರ ಶಿಷ್ಯರಾದ ಜಂಗಮರು. ಭಕ್ತರ ಮನೆಗಳೊಳಗೆ ಜಂಗಮರು ಬರುವುದಕ್ಕೆ ಯಾರನ್ನೂ ಕೇಳಬೇಕಾಗಿಲ್ಲ. ನಮ್ಮ ಗುರುಗಳಿಗೆ ಸಲ್ಲಿಸಬೇಕಾದ ಸೇರು ನವಣೆಯನ್ನು ಕೊಟ್ಟುಬಿಡು ಹೊರಟುಹೋಗುತ್ತೇವೆ.

ಮಾರಿ :—ಸೇರು ನವಣೆಯನ್ನು ಕೊಡಬೇಕಾದವಳು ನಾನಲ್ಲ. ಕೇಳುವುದಕ್ಕೆ ಅಧಿಕಾರಿಗಳು ನೀವಲ್ಲ. ಕೊಡುವವರೇ ಬೇರೆ, ತೆಗೆದುಕೊಳ್ಳುವವರೇ ಬೇರೆ. ಈರೀತಿ ದುಡುಕಿ ನೀವು ಒಳಗೆ ಬಂದಿರುವುದು ನ್ಯಾಯವಲ್ಲ.

೩ನೆ. ಪ್ರ. :—ನ್ಯಾಯವಾಗಲಿ ಅನ್ಯಾಯವಾಗಲಿ ನಾವೇನೋ ಒಳಗೆಬಂದು ಬಿಟ್ಟಿದ್ದೇವೆ. ಈಗ ಸೇರು ನವಣೆಯು ನಮ್ಮ ಗುರುಗಳಿಗೆ ಸಲ್ಲಬೇಕು. ಅದನ್ನು ಪಡೆಯುವುದಕ್ಕೆ ಗುರುಗಳು ನಮಗೆ ಅಧಿಕಾರವನ್ನು ಕೊಟ್ಟಿರುತ್ತಾರೆ. ಕೊಡುವವಳು ನೀನಲ್ಲದಿದ್ದರೆ ಮತ್ತಾರು.

ಮಾರಿ :—

ಕಂದ|| ಕೊಡುವವನೆನ್ನಯ ನಾಥಂ |
ಪಡೆವವನಾ ಜಂಗಮಾರ್ಯ ನಿಂತಿರಲೆನ್ನಂ ||
ಕಡುದರ್ಪದಿ ನಾಲ್ವರ್ಕಳ್ |
ಕೊಡುಕೊಡುಕೊಡು ಯೆಂದೊರಲ್ದು ಪೀಡಿಸಲೇಕೈ ||

೪ನೆ ಪ್ರ. —ತಾಯಿ, ನಿನಗೇಕಿಷ್ಟು ಕೋಪ. ನಾವು ನಿನ್ನನ್ನು ಪೀಡಿಸುವುದಕ್ಕಾಗಿ ಬಂದವರಲ್ಲ. ನಮಗೆ ಬೇಕಾದುದು ಸೇರು ನವಣೆ, ಕೊಡಬೇಕಾದವನು ನಿನ್ನ ಪತಿಯಾಗಿದ್ದರ, ಅವನಿಂದಲೇ ಕೊಡಿಸು. ನಮಗೇನು ? ಯಾರಿಂದಲಾದರೂ ಸರಿಯೇ ಬರಬೇಕಾದದ್ದು ಬಂದರಾಯಿತು.

ಮಾರಿ.—ಅಯ್ಯಾ, ನನ್ನಪತಿಯು ಈಗ ಯಾರಿಗೂ ಏನನ್ನೂ ಕೊಡುವಂತಿಲ್ಲ. ನೀವು ಇಲ್ಲಿಗೆ ವ್ಯರ್ಥವಾಗಿ ಬಂದಿರಿ.

೧ನೆ. ಪ್ರ. :—ಹಾಗಾದರೆ ನೀನೇ ಕೊಡು. ಧಾನ್ಯವು ನಮಗೆ ಸಲುವಳಿಯಾದಲ್ಲದೆ ನಾವು ಬೇರ ಇಲ್ಲಿಂದ ಹೋಗುವುದಿಲ್ಲ.

ಮಾರಿ :—ಹಾಗೋ ! ಕೊಡುವುದಿಲ್ಲವೆಂದು ಹೇಳಿದರೆ, ನೀವು ಮಾಡುವುದೇನು ?

೨ನೆ. ಪ್ರ :—ತಾಯಿ, ವೃಥಾ ವಾಗ್ವಾದವೇಕೆ ? ನೀನು ಕೊಡುವುದೇ ಇಲ್ಲವೆಂದರೆ ನಾವು ಬಿಡುವುದೇ ಇಲ್ಲ. ನೀನಾಗಿಯೇ ಕೊಡದಿದ್ದರೆ ನಾವಾಗಿಯೇ ತೆಗೆದುಕೊಂಡು ಹೋಗುವೆವು.

ಮಾರಿ :—ಅಯ್ಯಾ ! ನಿಮ್ಮ ನಡೆನುಡಿಗಳನ್ನು ನೋಡಿದರೆ ನಿಮ್ಮನ್ನು ಚೋರರೆಂದೇ ಭಾವಿಸಬೇಕಾಗಿದೆ.

೩ನೆ. ಪ್ರ. :—ಕೊಡಬೇಕಾದುದನ್ನು ನ್ಯಾಯವಾಗಿ ಕೊಡದಿದ್ದರೆ, ಬಿಟ್ಟುಬಿಡಲಾದೀತೆ ? ಬಲಾತ್ಕಾರದಿಂದಲಾದರೂ ತೆಗೆದುಕೊಳ್ಳಬೇಕಾಗುವುದು.

ಮಾರಿ :—ಹಾಗಾದರೆ ನಾನು ಖಂಡಿತವಾಗಿಯೂ ಕೊಡುವುದೇ ಇಲ್ಲ. ನೀವೇನು ಮಾಡುವಿರೋ ನೋಡೋಣ.

೪ನೆ. ಪ್ರ. :—ಅಯ್ಯಾ ಪ್ರಣವ, ಈಕೆಯೊಂದಿಗೆ ಒಳ್ಳೆಯ

ಮಾತನಾಡಿ ಫಲವಿಲ್ಲ. ಬನ್ನಿ, ಗುರುಗಳಪ್ಪಣೆಯಂತೆ ನಡೆಸೋಣ. (ಎಲ್ಲರೂ ಒಳನುಗ್ಗಿ ಸಾಮಾನುಗಳನ್ನು ಸಾಗಿಸುವರು.)

ಮಾರಿ :—(ಮಾರನ ಮುಸಕನ್ನು ತೆಗೆದು) ಪ್ರಾಣೇಶ್ವರಾ, ಇದೇನನ್ಯಾಯ. ಇವರು ಯಾರೋ ನಾಲ್ವರು ಗಂಗಾಧರಯ್ಯನವರ ಕಡೆಯವರೆಂದು ಹೇಳಿಕೊಂಡು ನಮ್ಮ ಸರ್ವಸ್ವವನ್ನೂ ದೋಚಿಕೊಂಡು ಹೋಗುತ್ತಿರುವರಲ್ಲಾ, ಮುಂದೇನು ಮಾಡುವುದು.

ಮಾರ :—(ಎದ್ದು ಕುಳಿತು) ಇದಕ್ಕೆ ನಾವೇನು ಮಾಡಲಾದೀತು. ನಾವೀರ್ವರು, ಮೇಲೆ ದುರ್ಬಲರು. ಅವರಾದರೋ ನಾಲ್ವರೂ ಬಲಶಾಲಿಗಳು. ಅವರ ಮೇಲೆ ನಮ್ಮ ಶಕ್ತಿಯು ಕೆಂಡಲಾರದು.

ಮಾರಿ :—ಪ್ರಭು ಏನು ಹೇಳಿದೆ, ನಾವು ದುರ್ಬಲರೇ. ನಮ್ಮ ದೇಹಬಲವು ಕಡಿಮೆಯಾದರೆ ಆತ್ಮಶಕ್ತಿಯೂ ಕಡಿಮೆಯೇ. ನೀನು ಸುಮ್ಮನೆ ಕುಳಿತು ನನಗಪ್ಪಣೆಯನ್ನು ಕೊಟ್ಟು ನೋಡು. ಇವರೆಲ್ಲರನ್ನೂ ಕ್ಷಣಮಾತ್ರದಲ್ಲಿಯೇ ನಿಗ್ರಹಿಸುವೆನು.

ಮಾರ :—ಸಖಿ, ಅವರು ಯಾರೆಂದು ತಿಳಿದಿರುವೆ? ಸಾಕ್ಷಾತ್ ಪರಮೇಶ್ವರನ ಪ್ರಮಥಗಣಗಳಲ್ಲವೇ. ಆ ಮಹಿಮಾಶಾಲಿಗಳನ್ನು ಅಲ್ಪಳಾದ ನೀನು ಹೇಗೆ ನಿಗ್ರಹಿಸುವೆ.

ಮಾರಿ :—ಪ್ರಭು,

ಕಂದ|| ಪ್ರಮಥರ್ಕಳಾದೊಡೇಂ ಸಿರಿ |
ರಮಣ ಸರೋಜಾತಭವರ ಚರರಾದೊಡಮೇಂ ||
ಯಮಕಿಂಕರರಾದೊಡಮೆ |
ನ್ನಮಿತ ಪತಿವ್ರತದ ಬಲದಿ ದಹಿಪೆನು ಚಣದೊಳ್ ||

ನಿನ್ನ ಅಪ್ಪಣೆಯನ್ನೇ ನಿರೀಕ್ಷಿಸುತ್ತಿರುವೆನು.

ಮಾರ :—ಸಖಿ, ಸ್ವಲ್ಪ ನಿಧಾನಿಸು. ಯೋಚಿಸಿ ಹೇಳುವೆನು. (ಯೋಚಿಸುತ್ತಿರುವನು)

ಈಶ್ವರ :—(ಮರೆಯಲ್ಲಿ) ಪಾರ್ವತಿ, ಈ ಮಹಾನುಭಾವಳ ನುಡಿಗಳನ್ನು ಕೇಳಿದೆಯಾ. ಈಕೆ ಸಾಮಾನ್ಯೆಯಲ್ಲ.

ವೃತ್ತ||

ಪತಿಯಿಂದಂ ಪರದೈವಮಿಲ್ಲಮೆನುತಂ ಸಂಪ್ರೀತಿ ಸದ್ಭಕ್ತಿಯಿಂ | ಪ್ರತಿನಿತ್ಯಂ ಪರಿಚರ್ಯೆಗೆಯ್ವಳವನಂ ಯೀಶೀಲೆ ಗುಣಾದಿಂ | ದರುಂಧತಿಯು, ಸೀತೆಯು, ಮದ್ರರಾಜ ಸುತೆಯಂ, ಕ್ಷೀರೇಜ ಸಂಜಾತೆಯಂ | ಸತಿನಿನ್ನಂ, ಶಚಿಯಂ ವಿಧರ್ಭಸುತೆಯಂ ತಾಂ ಸಾಟಿಗೆಯ್ದಿರ್ದಪಳ್ ||

ಅಲ್ಲದೆ

ಕಂದ|| ಕನಸಿನೊಳಾದರು ಪುಸಿಯಂ |
ನೆನೆಯಳು ಗುಣಶೀಲೆ ಋಜುಗುಣಾನ್ವಿತೆ ಮಹಿಮಾ |
ಘನೆ ಕನಲ್ದೊಡೆ ಯೀ ಪ್ರಮಥರ್ |
ಘನವಹ್ನಿಯ ಸಾರ್ದಪತಗತತಿಯಂತಕ್ಕುಂ ||

ಹಿಂದೆ ನಾನು, ಈಕೆಯಲ್ಲಿ ಭಿಕ್ಷವನ್ನು ಯಾಚಿಸಿದಾಗ ಈಕೆಯು ಕೋಪದಿಂದ ನನ್ನನ್ನೇ ತಿರಸ್ಕರಿಸಿದಳು. ಇನ್ನು ಈ ಪ್ರಮಥರ ಪಾಡೇನು.

ಪಾರ್ವತಿ :—ನಿಜ, ನಿಜ. ಈಕೆಯು ಮಹಾನುಭಾವಳೆಂಬುದನ್ನು ಈಕೆಯ ತೇಜಸ್ಸೇ ವ್ಯಕ್ತಗೊಳಿಸುತ್ತಿರುವುದು.

ಕಂದ|| ಹೋಮಾನಲ ನೋಲ್ಪಾವನ |
ಸೋಮನವೋಲ್ ಸೌಮ್ಯ, ಶಾಂತ, ಸುಖಕರ ಮೆನಿಕುಂ ||
ವ್ಯೋಮಮಣಿಯ ವೋಲುಗ್ರಂ |
ಭಾಮಿನಿಯಾನನದಿ ಮಿಸುವುದನುಪಮ ತೇಜಂ ||

ನಾರದ :—ಸತ್ಯ, ಮುಂದೇನಾಗುವುದೋ ನೋಡೋಣ.

ಮಾರ :—ಸಖಿ, ಇಷ್ಟೊಂದು ವ್ಯಗ್ರಳಾದೆಯೇಕೆ? ನಿನ್ನ ಶಾಂತಗುಣವೆಲ್ಲಿ ಹೋಯಿತು. ನಿನಗಿನ್ನೂ ಜ್ಞಾನಜ್ಯೋತಿಯ ದರ್ಶನವಾಗಲಿಲ್ಲ. ಮನೋರಮೆ, ಈ ನಮ್ಮ ಸರ್ವಸ್ವಹರಣವೇ ನಮ್ಮ ವ್ರತದ ಉದ್ಯಾಪನೆಯೆಂದು ತಿಳಿಯದೇ ಹೋದೆಯಾ! ಹುಚ್ಚೀ. ಲೋಕದಲ್ಲಿ ಜನಗಳು ತಮ್ಮ ಕಾಣಿಕೆಯನ್ನು ಶಿವಲಿಂಗದ ಮುಂದಿಟ್ಟಾಗಲೀ, ಅಥವಾ ಬೇರೆ ಯಾರಾದರೂ ಯೋಗ್ಯರಾದವರ ಕೈಯಲ್ಲಿಟ್ಟಾಗಲೀ ಪರಮೇಶ್ವರನಿಗೆ ಅರ್ಪಿತವಾದಂತೆ ಭಾವಿಸಿ ಸಂತೋಷಪಡುವರು. ಪ್ರತ್ಯಕ್ಷವಾಗಿ ಪರಮೇಶ್ವರನನ್ನು ಕಾಣದವರು ಈರೀತಿ ಬೇರೆಬೇರೆ ರೂಪಗಳಲ್ಲಿ ಭಗವದಂಶವನ್ನು ಆರೋಪಿಸಬೇಕು ಈ ಭಾವನೆಯಿಂದಲೇ ಎಷ್ಟೋ ಮಟ್ಟಿಗೆ ಅಂತರಂಗ ಶುದ್ಧಿಯೂ, ಭಗವತ್ಪ್ರೀತಿಯೂ ಆಗುವುವು. ಇನ್ನು ಚಂದ್ರಮೌಳಿಯು ತಾನೇ ಸಾಕ್ಷಾತ್ತಾಗಿ ತನ್ನ ದೂತರನ್ನು ಕಳಿಸಿ, ನಾವು ಕೊಡದೇ ಇದ್ದಾಗ್ಯೂ ಬಲಾತ್ಕಾರದಿಂದ ನಮ್ಮ ಸರ್ವಸ್ವವನ್ನೂ ಕೊಂಡೊಯ್ಯುತ್ತಿರಲು ನಮ್ಮ ಭಾಗ್ಯಕ್ಕೆಣೆಯುಂಟೆ ಇದರಿಂದ ಸರ್ವಸ್ವವನ್ನೂ ಈಶ್ವರಾರ್ಪಣ ಮಾಡಬೇಕೆಂಬ ನಮ್ಮ ಉದ್ದೇಶವು ಸಿದ್ಧಿಸಿರುವುದಲ್ಲದೆ ನಾವು ಕೈಯೆತ್ತಿ ಕೊಡಲಿಲ್ಲವಾದುದರಿಂದ ನಮ್ಮ ವ್ರತಕ್ಕೂ ಭಂಗ ಬಾರಲಿಲ್ಲ. ದಯಾಮಯನಾದ ಸಾಂಬಮೂರ್ತಿಯು ಈ ನಮ್ಮ ವಿತ್ತದೊಂದಿಗೆ ನಮ್ಮ ಪಾಪ ಕೋಟಿಗಳನ್ನೂ ಸೆಳೆದಿದ್ದಾನೆ.

ತಾನೇ ಸೋತು ನಮಗೇನೇ ಜಯಲಾಭವನ್ನು ದೊರಕಿಸಿದ್ದಾನೆ. ಇದಕ್ಕಾಗಿ ನೀನು ಸಂತೋಷಪಡಬೇಕಲ್ಲದೆ ಕೋಪಿಸಬಹುದೇ ಹೇಳು.

ಪಾರ್ವತಿ :— ದೇವ, ಮಾರನು ನಿಜವಾಗಿಯೂ ಮಹಾನುಭಾವನು.

ನಾರದ :—ಮಹಾಜ್ಞಾನಿಯೂ ಹೌದು, ಆದರೆ ಅವನ ವೈಲಕ್ಷಣ್ಯವು ಮಾತ್ರ ಅವನನ್ನು ಬಿಡದು.

ಈಶ್ವರ :—ನಿಜ, ಇವನು ವಿಚಿತ್ರ ಪುರುಷನೇ ಸರಿ. ಏಕೆಂದರೆ-

ವೃತ್ತ॥

ಈತಂ ಲೋಭದ ಸೋಂಪಿಸುಂ ಜರಿಸಿಯುಂ ಸರ್ವಸ್ವದಾತಾರನೈ | ಈತಂ ಲೌಕಿಕ ಸೌಖ್ಯಮಧ್ಯದೊಳಗಂ ವೈರಾಗ್ಯ ಸಂಪೂರ್ಣನೈ || ಈತಂ ಕರ್ಕಶಮಾನಸಂಬೊಲಿರೆಯುಂ ಸಂಪ್ರೀತಿ ಶುದ್ಧಾತ್ಮನೈ | ಈತಂ ಭಕ್ತರೊಳುತ್ತಮೋತ್ತಮನು ಮತ್ತೀಮಾಸ್ಪದಂ ಸ್ಪರ್ಧಿಯೈ ॥

ಇವನಂತಹ ವ್ರತಾಚಾರಿಗಳನ್ನಾಗಲೀ ದೃಢಭಕ್ತರನ್ನಾಗಲೀ ನಾನು ಇದುವರೆಗೂ ನೋಡಲಿಲ್ಲ.

ಮಾರಿ :—ನಾಥ, ನನಗೇಕಿಂತು ಪದೇಪದೇ ವಿಸ್ಮೃತಿಯಾಗುತ್ತಿರುವುದು. ಪ್ರಾರಂಭದಲ್ಲಿ ಭಿಕ್ಷವನ್ನು ಬೇಡಿದಾಗ ಪಾರ್ವತೀ ರಮಣನನ್ನು ಪಾಪಿಯಾದ ನಾನು ಕ್ರೋಧಾಂಧಳಾಗಿ ತಿರಸ್ಕರಿಸಿದೆನು. ಅದರಿಂದೇನಾದರೂ ಮುನಿಸಿಗೊಂಡು ಮಹಾದೇವನು ನನಗೀರೀತಿ ಮರೆಪೆಯನ್ನುಂಡೊಡ್ಡುತ್ತಿರಬಹುದೆ ? ಪ್ರಭು, ನಾನು ಮಹಾಪರಾಧಿ ಶ್ಚಾತ್ತಾಪ ಯುಕ್ತಳಾದ ನನ್ನನ್ನು ಮನ್ನಿಸು.

ಪಾರ್ವತಿ :—ನಾಥ, ಈ ಮಹಾನುಭಾವಳಲ್ಲಿ ಕೋಪಿಸುವುದು ಯಾರಿಂದಾದೀತು ?

ಈಶ್ವರ :— ಆದ್ದರಿಂದಲೇ ಅಲ್ಲವೇ ನಾನು ಸೋತಿರುವುದು.

ನಾರದ :— ದೇವ, ಈ ಬಗೆಯ ಪ್ರೇಮವನ್ನು ಗೆಲುವುದಾರಿಂದಲೂ ಸಾಧ್ಯವಲ್ಲ.

ಮಾರ :—ಪ್ರಿಯೇ, ನೀನು ಪಶ್ಚಾತ್ತಾಪ ಪಡುತ್ತಿರುವುದು ನನಗೆ ಸಮಾಧಾನ. ಇನ್ನು ಸ್ವಲ್ಪಕಾಲ ಮಾತ್ರ ಸುಮ್ಮನಿರು. ನಾನು ಮತ್ತೆ ಮೊದಲಿನಂತೆ ಮುಸುಕಿಟ್ಟುಕೊಳ್ಳುವೆನು. ಏನೇನು ನಡೆಯುವುದೋ ನಡೆಯಲಿ. (ಮುಸುಕಿಟ್ಟುಕೊಳ್ಳುವನು)

ಈಶ್ವರ :—ನಾರದ, ಪಾರ್ವತಿ, ಬನ್ನಿ. ಈ ಮಹಾಭಕ್ತಳೊಂದಿಗೆ ಒಂದೆರಡು ವಿನೋದದ ಮಾತುಗಳನ್ನಾಡಿ ನಂತರ ಪ್ರಸನ್ನರಾಗೋಣ. (ಮಾರಿಯೆದುರಿಗೆ ಬರುವರು. ಈಶ್ವರನು ಮಾರಿಯನ್ನು ಕುರಿತು) ತಾಯಿ ಮಾರಭಕ್ತನು ಎದ್ದಿರುವನೆ ?

ಮಾರಿ :—(ನೋಡಿ, ಸ್ವಗತಂ) ಆ ! ಪ್ರಭುವು ! ಬಂದೇಬಿಟ್ಟನು. (ಪ್ರಕಾಶಂ) ಜಂಗಮದೇವ, ಈ ಆಸನವನ್ನು ಪವಿತ್ರಗೊಳಿಸಿರಿ. ಪತಿಯು ಏಳದೇ ಇದ್ದದ್ದನ್ನು ನೋಡಿಯೇ ಅಲ್ಲವೆ ತಾವು ಹೊರಟುಹೋದದ್ದು. ತಮ್ಮ ಜೊತೆಯಲ್ಲಿ ಬಂದಿರುವ ಇವರಾರು ?

ಈಶ್ವರ—ಇವಳು ನನ್ನ ಪತ್ನಿ. ಈತನು ನನ್ನ ಆಪ್ತನು.

ಮಾರಿ :— ಇವರನ್ನು ನೋಡಿ ನನಗೆ ತುಂಬಾ ಸಂತೋಷವಾಯಿತು. (ಪಾರ್ವತಿಯನ್ನುದ್ದೇಶಿಸಿ) ಅಮ್ಮಯ್ಯಾ ಹೀಗೆ ಬನ್ನಿ. ಇಲ್ಲಿ ನನ್ನ ಸಮೀಪದಲ್ಲಿರುವ ಈ ಕಂಬಲಾಸನದಲ್ಲಿ ಮಂಡಿಸಿ. ತಮ್ಮ ಹೆಸರೇನಮ್ಮಾ ?

ಪಾರ್ವತಿ :—ವತ್ಸೆ, ನನ್ನ ಹೆಸರು ಗೌರಮ್ಮನೆಂದು.

ಮಾರಿ :—ಗಂಗಾಧರಯ್ಯ ! ಗೌರಮ್ಮ ! ಈ ಹೆಸರುಗಳು ನನ್ನ ಮನಸನ್ನೆಳೆಯುತ್ತಿರುವುವು. ನಿಮಗೀ ಹೆಸರುಗಳನ್ನಿಟ್ಟ ಪುಣ್ಯಾತ್ಮರಾರೋ ! (ನಾರದನನ್ನುದ್ದೇಶಿಸಿ) ಸ್ವಾಮಿ, ತಾವು ನಿಂತಿರುವುದೇಕೆ. ಈ ದರ್ಭಾಸನದಲ್ಲಿ ಮಂಡಿಸೋಣವಾಗಲಿ. ತಮ್ಮ ನಾಮಧೇಯವೇನೋ ?

ನಾರದ :—ಸುಮಂಗಲಿ, ನನ್ನನ್ನು ನಾರಯ್ಯನೆಂದು ಕರೆಯುವರು.

ಮಾರಿ.—ಗಂಗಾಧರಯ್ಯ ! ಗೌರಮ್ಮ ! ನಾರಯ್ಯ ! ಎಷ್ಟು ಮಧುರವಾದ ಹೆಸರುಗಳು. ಆಗಲಿ, ಗುರುದೇವ ತಮ್ಮ ಆಗಮನದ ಉದ್ದೇಶವೇನು ?

ಈಶ್ವರ :— ಮಾರಭಕ್ತನನ್ನು ನೋಡಿ ಮಾತನಾಡಿಸೋಣವೆಂದು ಬಂದೆವು. ಅವನು ಇದುವರೆಗೂ ಏಳಲೇ ಇಲ್ಲವೆಂದೆಯಲ್ಲವೇ.

ಮಾರಿ :—ಹಾಗೆನ್ನಲಿಲ್ಲ. ಏಳದೇ ಇದ್ದುದನ್ನು ತಾವೇ ನೋಡಿದರೆಂದು ಹೇಳಿದೆ.

ಈಶ್ವರ :— ನನ್ನ ಚಿಕಿತ್ಸೆಯಿಂದ ಏನೂ ಫಲವಾಗಲಿಲ್ಲವೇ ?

ಮಾರಿ —ಆಗುವುದಿಲ್ಲವೆಂದು ನಾನು ಮೊದಲೇ ಹೇಳಿದೆ. ನೀವು ನನ್ನ ಮಾತನ್ನು ನಂಬದೆ ವೃಥಾ ತೊಂದರೆ ಪಟ್ಟುಕೊಂಡಿರಿ.

ಈಶ್ವರ :—ಹಾಗಾದರೆ ಮಾರಭಕ್ತನ ಆಶೆಯನ್ನು ಬಿಟ್ಟಂತೆಯೇ ಆಯಿತೆ ?

ಮಾರಿ :— ತಾವು ಆಶೆಯಿಟ್ಟುಕೊಳ್ಳದೆ ಸುಮ್ಮನಿರುವುದೇ ಲೇಸು.

ಈಶ್ವರ :—ಹೋಗಲಿ, ಈಗ ನಮ್ಮ ಸೇರು ನವಣೆಯ ಗತಿ ಏನು ?

ಮಾರಿ ;—ನಮಗೇ ಈ ಗತಿಯಾಗಿರುವಾಗ ನಿಮ್ಮ ಸೇರು ನವಣೆಯ ಗತಿಯನ್ನು ಕುರಿತು ನಾನೇನು ಹೇಳಬಹುದು.

ಈಶ್ವರ :—ತಾಯಿ, ನಾನು ಮಹಾ ಯೋಗಿಯೆಂದು ನಿನಗೆ ಮೊದಲೇ ಹೇಳಿದ್ದೇನೆ. ನಿನ್ನ ಪತಿಯು ವಾಗ್ದಾನ ಮಾಡಿರುವ ಸೇರು ನವಣೆಯನ್ನು ಕೊಟ್ಟುಬಿಡು. ನನ್ನ ಯೋಗಬಲದಿಂದ ನಿನಗೆ ಈ ಕ್ಷಣವೇ ನಿನ್ನ ಇಷ್ಟ ದೈವವಾದ ಶಂಕರನನ್ನು ಪ್ರತ್ಯಕ್ಷಗೊಳಿಸಿ ತೋರಿಸುವೆನು.

ಮಾರಿ.—ಪ್ರಭು, ನಾನು ಆಸೆಗೊಳಗಾಗುವಳಲ್ಲ.

ಕಂದ|| ಹರನುಂ ಹರಿಯು ವಿಧಿಯುಂ |
ಪರಮಾತ್ಮನುಮೆನಗೆ ಪತಿಯುಳಿವಿನ್ನಿಲ್ಲಂ ||
ದುರಿತಸುಖಂಗಳ ಸಮನೆಂ |
ದರಿಸೆನು, ತೊರೆಯೆನು ಮಡೀಯ ನೋಂಪಿಯು
ನೆಂದುಂ ||

ಅಲ್ಲದೆ, ಗುರುದೇವ; ಧರ್ಮವನ್ನಾಚರಿಸುವವರಿಗೆ ದೈವವು ಅನುಕೂಲಿಸಲೇ ಬೇಕು. ನನ್ನಲ್ಲಿ ನಿಜವಾದ ಭಕ್ತಿಯಿದ್ದರೆ ಪರಮ ಕಾರುಣಿಕನಾದ ಚಂದ್ರಮೌಳಿಯು ನಾವಿರುವಲ್ಲಿಗೇ ಬಂದು ದರ್ಶನವನ್ನು ಕೊಟ್ಟು ಕಾಪಾಡುವನು.

ಈಶ್ವರ :—ನಿಜ, ವತ್ಸೇ. ಬಾರದೇ ಇರುವುದು ಅಸಾಧ್ಯವಾದುದರಿಂದಲೇ ಓಡಿಬಂದಿರುವೆನು. ಇದೋ ನೋಡು (ಮೂವರೂ ನಿಜರೂಪವನ್ನು ಧರಿಸಿ) ನಾನೇ ನಿಮ್ಮನ್ನು ಜಂಗಮ ರೂಪದಿಂದ ಇಷ್ಟು ದಿನಗಳವರೆಗೂ ಕಾಡಿಸಿದ ಪರಮೇಶ್ವರನು. ಇದೋ ಈಕೆಯೇ ಪರ್ವತರಾಜ ಕನ್ಯೆಯು. ಈ ಮಹಾತ್ಮನು ದೇವಮುನಿಯಾದ ನಾರದನು.

ಮಾರಿ.—(ಮಂಡಿಯೂರಿ ಕೈ ಜೋಡಿಸಿ) ನನ್ನ ಭಾಗ್ಯದ ನಿಧಿಯೇ, ಇಂದಿಗೆ ನಿನಗೆ ದಾಸಿಯಾದ ನನ್ನಮೇಲೆ ದಯ ಬಂತೇ. ಮಹಾಗುರುವೇ! ನನ್ನ ಅಪರಾಧಗಳನ್ನು ಕ್ಷಮಿಸಿದೆಯಾ. ಅಂಬಾ, ಜಗನ್ಮಾತೆ, ಭಕ್ತವತ್ಸಲೆ, ಅಲ್ಪಳಾದನನ್ನಮೇಲೆ ಅನುಗ್ರಹಮಾಡುವುದಕ್ಕಾಗಿ ಇಷ್ಟು ದೂರ ದಣಿದು ಬಂದೆಯಾ! ಅವ್ಯಾಜ ಕರುಣಾಳುವಾದ ನಾರದಸ್ವಾಮಿಯೇ; ಮಹಾನುಭಾವನೇ, ಇದೆಲ್ಲವೂ ನಿನ್ನ ಅನುಗ್ರಹ. (ಹಾಗೆಯೇ ಕಣ್ಮುಚ್ಚಿ) ಇದೇನು ದಿವ್ಯಪ್ರಭೆ! ಇದಾವಲೋಕ? ಇಲ್ಲಿ ಕಾಣುವ ಈ ಜ್ಯೋತಿರ್ಮಯ ಮೂರ್ತಿಗಳಾರು! ಆಹಹ! ಈ ಆನಂದದ ಬರವನ್ನು ನಾನು ಸೈರಿಸಲಾರೆನು. (ಮೂರ್ಛಿತೆಯಾಗುವಳು)

ಈಶ್ವರ —ಉಮಾ, ಈ ಪತಿವ್ರತಾ ರತ್ನವನ್ನು ಜೋಕೆಯಿಂದೆ ನೋಡಿಕೊ. ಆನಂದಾತಿರೇಖದಿಂದ ಪ್ರಾಣಗಳಿಗೇನಾದರೂ ಹಾನಿ ಬಂದೀತು. ನಾನು ಮಾರಭಕ್ತನನ್ನೆಚ್ಚರಿಸುವೆನು. (ಮಾರನನ್ನು ಕೈಯಿಂದ ತಟ್ಟಿ)

ಕಂದ|| ಬಲುಬಳಲಿದೆ ಯೆಲೆ ಕಂದಾ |
ಛಲಮಂ ಸಾಧಿಸಿದೆ ಯೇಳು ಹೃದಯಾನಂದಾ ||
ಗೆಲಿಯೊ ನೀನೆ ಅಮುಂದಾ |
ಮಲಪದವಿಯ ನೀವೆ ನಿನಗೆ ನಾನೊಲವಿಂದ ||

ಭಕ್ತರತ್ನವೆ, ಏಳು, ಇದೋ ನಿನ್ನ ನಿಷ್ಠೆಗೆ ಮೆಚ್ಚಿ ಪ್ರಸನ್ನನಾಗಿರುವೆನು ಇಲ್ಲಿಗೆ ನಿನ್ನ ವ್ರತವು ಪರಿಸಮಾಪ್ತಿಯಾಯಿತು. ನಿನ್ನ ಇಷ್ಟಾರ್ಥವನ್ನು ಸಲಿಸುವೆನು.

ಮಾರ :—(ಮಿಸುಕದೆ ಸುಮ್ಮನಿರುವನು)

ಈಶ್ವರ —ಭಕ್ತಾಗ್ರಣಿ, ಮೌನವಾಗಿರುವೆಯೆಲ್ಲ! ಏಳು ಏಳು! ನಾನು ಪ್ರತ್ಯಕ್ಷನಾದರೂ ನಿನಗಿನ್ನೂ ತೃಪ್ತಿಯಾಗಲಿಲ್ಲವೆ?

ಮಾರ :—(ಸುಮ್ಮನಿರುವನು).

ಈಶ್ವರ —ಇದೇನು ವಿಚಿತ್ರ, ಇವನು ಏಳಲೇ ಇಲ್ಲವಲ್ಲಾ. ನಾರದ, ಈ ಮೌನದ ಅರ್ಥವೇನಿರಬಹುದು?

ನಾರದ —ದೇವ, ಸರ್ವಾಂತರ್ಯಾಮಿಯಾದ ನಿನಗೆ ತಿ' ಯದೇ? ಆದರೂ ನನಗೆ ತಿಳಿದಮಟ್ಟಿಗೆ ಹೇಳುವೆ' ಕೇಳು.

ಕಂದ|| ಏಳಲೊಡಂ ಧಾನ್ಯವನೀಂ |
ಕೇಳುವೆಯೆಂದಿಂತು ಮೌನವಂತಿರಲಕ್ಕುಂ ||
ಕಾಲಾಂತಕ ನೀನಭಯವ |
ಪೇಳಿವನ ಬೆದರ್ಕೆಪೋಕು ಮೊಡನಿವನೇಳ್ವಂ ||

ಈಶ್ವರ :—ಆ! ಇರಬಹುದು! ಈ ಭಕ್ತರಿಗೆ ಪ್ರಸನ್ನನಾಗುವ ಸಂಭ್ರಮದಲ್ಲಿ ನಾನು ಮಾರನ ವಾಗ್ದಾನದ ವಿಷಯವನ್ನೇ ಮರೆತೆನು. ಅವನಾದರೋ ಅದನ್ನು ಸರ್ವದಾ ಚಿಂತಿಸುತ್ತಿರುವನು. ಆದ್ದರಿಂದಲೇ ನಾನು ಪ್ರಸನ್ನನಾದರೂ ಕಣ್ದೆರೆದು ನೋಡದೆ ಸುಮ್ಮನಿರುವನು. ಎಲೈ ಮಹಿಮಾಶಾಲಿಯಾದ ಮಾರಭಕ್ತನೆ,

ಕಂದ|| ಅರಿದೆನು ನಿನ್ನಯ ಮನಮಂ |
ತೊರೆದೆನು ಧಾನ್ಯವನು ಮಗುಳೆ ಕೇಳೆನದೆಂದುಂ ||
ತರಳನೆ ಬಿಡು ದುಗುಡವ ನೀಂ |
ಗಿರಿ ಸಂಭವೆಯಾಣೆ ಬೆನಕ ಷಣ್ಮುಖರಾಣೆ ||

ಎಲೈ ಸುಕೃತ ಶಾಲಿಯೇ, ಅಮೂಲ್ಯ ರತ್ನವಾದ ನೀನೇ

ನನಗೆ ದೊರಕಿರಲು ಅಲ್ಪವಾದ ನಿನ್ನ ಸೇರು ನವನೆಯುನ್ನು ನಾನೇನು ಮಾಡಲಿ.

ನಾರ :—(ಎದ್ದು ಸಾಷ್ಟಾಂಗವಾಗಿ ನಮಸ್ಕರಿಸಿ,)

ಕಂದ॥ ಶರಣು ಶರಣೆಂದು ಶೇಖರ |
ಶರಣೆಲೆ ಗಿರಿಜಾತೆನಾತೆ ನತಸುಖದಾತೇ ||
ಶರಣೆಲೆ ಸುರಮುನಿ ಶೇಖರ |
ಶರಣಾಗತನೆನ್ನ ಕಾವುದನುಪಮ ದಯೆಯಿಂ ॥

ದೇವದೇವ, ಇಂದಿಗೆನಗೆ ಪ್ರಸನ್ನನಾದೆಯಾ, ನನ್ನ ಭಾಗ್ಯ ಕಲ್ಪತರುವೇ, ಪಾಮರನಾದ ನನ್ನನ್ನು ಅನುಗ್ರಹಿಸುವುದಕ್ಕಾಗಿ ಇಲ್ಲಿಯವರೆಗೂ ಬಂದೆಯಾ. ಸ್ವಾಮಿಯೇ ನನ್ನ ಅಲ್ಪವಾದ ವ್ರತಕ್ಕೆ ಅನೋಘವಾದ ಫಲವನ್ನು ದೊರಕಿಸಿದೆ. ಇನ್ನು ನನ್ನ ಪುಣ್ಯಕ್ಕೆಣೆಯುಂಟೆ. ಏಕೆಂದರೆ—

ಸೀಸಪದ್ಯ ॥
ಯೋಗ ಭೋಗ ತ್ಯಾಗ ರಾಗಂಗಳೊಲಿಸದಿಹ ಭಾಗವತ ಭಾಗ್ಯನಿಧಿ ದೇವ ಬಂದೈ ॥ ದೇವ ಮಾನವದನುಜ ಸೇವೆಯನುಕೊಂಬ ಸಂಭಾವ್ಯನಭವ ಮಹಾನುಭಾವ ಬಂದೈ॥ ಶರಣೆಂದು ಬಂದವರ ದುರಿತಕೋಟಿಯು ಕಳೆದು ಪರಮ ಸಂಪ್ರೀತಿಯಲಿ ಕಾವ ಬಂದೈ | ಅವನ ಪದಸ್ಪರ್ಶ ಮೀವುದಮರತೆಯನಾ ಪಾವನಾತ್ಮಕ ಜಗಜ್ಜೀವ ಬಂದೈ ||
ನಮಿಪರಿಗೆ ಕೈವಲ್ಯದಾನಿ ಬಂದೈ |
ವಿಮಲಮನ ಭಕ್ತರಭಿಮಾನಿ ಬಂದೈ |
ಉಮೆಯರಸ ಸದ್ಗುಣ ನಿಧಾನಿ ಬಂದೈ |
ಅಮಮಪರಚತುರ ಸಂಧಾನಿ ಬಂದೈ ||

ಜಗತ್ಪ್ರಭು, ಸಾಂಬ, ನಿನ್ನ ಚರಣಪಂಕಜಗಳಲ್ಲಿ ಮತ್ತೆ ಮತ್ತೆ ಸಾಷ್ಟಾಂಗ ನಮಸ್ಕಾರ ಮಾಡುವೆನು, ದೇವ. ಅನಾಥನಾದ ನನಗೆ ನೀನೇ ನಾಥನು, ಮಹಾಪ್ರಭು.

ವೃತ್ತ ॥ (ಶಾ)
ಗಂಗಾ ತುಂಗತರಂಗ ರಂಜಿತ ಜಟಾಜೂಟಂ ವಿಭುಂ ಶಂಕರಂ । ಅಂಗೋದ್ಭಾವಿ ವಿಭೂತಿಭೂಷಿತ ಲಸತ್ಕಾಯಂ ವಿಮಾಯಂ ಶಿವಂ || ಶೃಂಗೋತ್ತುಂಗ ಗಿರೀಂದ್ರ ದಿವ್ಯನಿಲಯಂ ದೇವಂ ಮೃಡಾಣೀಪತಿಂ | ರಂಗಾಭ್ಯರ್ಚಿತ ಪಾದಪಂಕಜಯುಗಂ ಶ್ರೀ ಚಂದ್ರಮೌಳಿಂ ಭಜೇ ॥

(ಪಾರ್ವತಿಗೆ ನಮಸ್ಕರಿಸಿ) ಮಾತೆ, ವಿಶ್ವಜನನಿ, ಇಷ್ಟು ಕಾಲಾನಂತರ ಮಕ್ಕಳಮೇಲೆ ಅಂತಃಕರಣಬಂತೇ. ದೇವದೇವನು ಕಠೋರ ಪರೀಕ್ಷೆಗಳಿಗೆನ್ನನ್ನು ಗುರಿಪಡಿಸುತ್ತಿರಲು, ಪ್ರೇಮಮಯಿಯಾದ ನೀನು ನೋಡಿಯೂ ಸೈರಿಸಿದೆಯಾ ! ಅಮ್ಮಾ, ಮಕ್ಕಳನ್ನು ತಾಯಿಯಲ್ಲದೆ ಮತ್ತಾರು ಕಾಪಾಡುವರು.

ದಂಡಕ.
ಅಂಬೆ ಶ್ರೀಜಗದಂಬೆ | ಸೌಭಾಗ್ಯನಿಕುರುಂಬೆ | ಜಂಭಾರಿ ಸಂಪೂಜ್ಯೆ | ಶುಂಭಾದಿ ಖಲಮಥನೆ | ಅಂಭೋಜ ನಿಭನೇತ್ರೆ । ಗಂಭೀರ ಗಜಗಮನೆ | ಬಿಂಬಾಧರೇಶ್ಲಿಷ್ಟ | ಶಂಭು ಮಂಗಳಗಾತ್ರೆ | ಕಾಲಾಹಿ ವೇಣಿ ಶುಕ | ವಾಣಿ ಪಲ್ಲವ ಪಾಣಿ | ಭಾಲಲೋಚನರಾಣಿ | ಏಣಾಕ್ಷಿ ಕಲ್ಯಾಣಿ | ನವರಸಾಲಂಕಾರ | ಸಂಪೂರ್ಣ ಗುಣಾಸದನೆ | ಸಾವಿತ್ರಿ ಗಾಯತ್ರಿ | ಸರ್ವಮಂಗಳ ದಾತ್ರಿ | ಶ್ರೀದಾತ್ರಿ ಭೂದಾತ್ರಿ । ಕೈವಲ್ಯ ಸುಖದಾತ್ರಿ | ಭವಬಂಧಹಾರಿಣಿ | ಭಕ್ತಸುಖಕಾರಿಣಿ | ವಿಶ್ವಸಂಮೋಹಿನಿ | ವೀರ್ಯಸಂವರ್ಧಿನಿ | ಸೌಭಾಗ್ಯದಾಯಿನಿ । ಸಿಂಹರಥ ವಾಹಿನಿ | ಶ್ರೀಕಾಳಿ ಮಾಕಾಳಿ | ವರಭದ್ರಕಾಳಿ | ಶ್ರೀದೇವಿ ಭೂದೇವಿ | ಶ್ರೀಚಕ್ರ ವಾಸಿನಿ । ಚಿದ್ರೂಪೆ ಚಿತ್ಸೌಖ್ಯ | ದಾತೆ ಜಗನ್ಮಾತೆ । ಮನ್ಮಾತೆ ಸಂಪ್ರೀತೆ | ಸಕಲಪಾಪ ವಿಧೂತೆ | ಪಾಹಿಪಾಹಿ ಗಿರಿಜಾತೆ । ಶರಣಾಗತ ಪ್ರೀತೆ | ಪಾಹಿಮಾಂ ಪಾಹಿಮಾಂ । ಪಾರ್ವತೀಶ್ವರಿ ದೇವಿ | ನಮಸ್ತೇ ನಮಸ್ತೇ | ನಮಸ್ತೇ ನಮಸ್ತೇ ||

(ನಾರದನನ್ನುದ್ದೇಶಿಸಿ) ಮಹಾನುಭಾವನಾದ ನಾರದ ಸ್ವಾಮಿಯೇ, ಇದೆಲ್ಲವೂ ನಿನ್ನ ಪರಮಾನುಗ್ರಹ ಫಲವೆಂದೇ ತೋರುವುದು ಸಂದೇಹವೇನು.

ಕಂದ|| ಪಾಮರರನ್ನುದ್ಧರಿಸುವ |
ಪ್ರೇಮಾಂತಃಕರಣಪೂರ್ಣಹೃದಯಂ ಜವದಿಂ ||
ಹೈಮವತೀ ಸಿರಿರಮಣರ |
ಭೂಮಿಾತಲ ಕೆಳೆವಿಯತ್ತಿ ದೇವ ಮುನೀಂದ್ರಾ ||

ಇದೋ ಪ್ರಭು, ಚರಣಕಮಲಗಳಲ್ಲಿ ಶಿರಸ್ಸನ್ನಿಟ್ಟಿರುವೆನು, ದೀನನನ್ನು ಮನ್ನಿಸಬೇಕು. (ನಮಸ್ಕರಿಸುವನು)

ಮೂವರೂ :—ವತ್ಸ, ನಿನಗೆ ಶುಭವಾಗಲಿ ಏಳು.

ನಾರ :—(ಎದ್ದು ಪತ್ನಿಯನ್ನೆಬ್ಬಿಸಿ) ಧನ್ಯಾತ್ಮಳೆ ಏಳು ಏಳು ಎದುರಿಗೆ ನಿಂತಿರುವ ಈ ಭಕ್ತ ಚಿಂತಾಮಣಿಗೆ ಸಾಷ್ಟಾಂಗ ಮೆರಗು. ವಾತ್ಸಲ್ಯ ದೃಷ್ಟಿಯಿಂದ ನಮ್ಮನ್ನೇ ನೋಡುತ್ತಿರುವ ಈ ಸೌಭಾಗ್ಯ ದೇವತೆಗೆ ಕೈ ಜೋಡಿಸು. ಅವ್ಯಾಜಕರುಣಾಳುವೂ, ಪಾಮರೋದ್ಧಾರಕನೂ ಆದ ಈ ನಾರದಗುರುವಿಗೆ ಅಭಿವಂದಿಸು. ಇವರ ಆಶೀರ್ವಾದಗಳೇ ನಮ್ಮ ವ್ರತದ ಅತ್ಯುಚ್ಚವಾದ ಫಲಗಳು.

ನಾರಿ :—ಪ್ರಭು. ಮಾತಾಪಿತೃಗಳಿಗೆ ಗಂಡು ಮಕ್ಕಳಿಗಿಂತಲೂ ಹೆಣ್ಣುಮಕ್ಕಳ ಮೇಲೆಯೇ ಪ್ರೇಮವು ವಿಶೇಷವಲ್ಲವೇ. ಆದ್ದರಿಂದಲೇ ನಿನಗಿಂತಲೂ ಮೊದಲೇ ನನಗೆ ಈ ಜಗಜ್ಜೀವನರ ಸಂದರ್ಶನವಾಯಿತು. ನಾನು ನಿಜವಾಗಿಯೂ ಕೃತಾರ್ಥಳಾದೆನು.

ಪಾರ್ವತಿ :—ನಾಥ, ಇನ್ನು ಸಾವಕಾಶವೇಕೆ! ಇವರನ್ನೂ ಕರೆದುಕೊಂಡು ಹೊರಡೋಣ.

ನಾರದ :—ದೇವ ಜಗದುದ್ಧಾರ ಕಾರ್ಯವು ಇನ್ನೂ ಯಥೇಷ್ಟ ಯಾಗಿರುವುದು.

ಈಶ್ವರ :—ಆಗಬಹುದು. ಹೊರಡೋಣ. (ಮೇಲೆ ನೋಡಿ) ವಿಮಾನಂ, ವಿಮಾನಂ, (ಮೇಲಿನಿಂದ ವಿಮಾನವು ಬರುವುದು.) ಭಕ್ತೋತ್ತಮರೇ, ಈ ಲೋಕದಲ್ಲಿ ನಿಮ್ಮ ಕರ್ತವ್ಯವು ನೆರವೇರಿತು. ದಿವ್ಯ ಸಾಯುಜ್ಯ ಪದವಿಯು ನಿಮಗಾಗಿ ಕಾದಿರುವುದು. ವಿಮಾನವನ್ನಾರೋಹಿಸಿ, ಕೈಲಾಸಕ್ಕೆ ಹೊರಡೋಣ.

ಮಾರ.—ದೇವ, ನಿನ್ನನುಗ್ರಹದಿಂದ ಧನ್ಯನಾದೆನು. ಆದರೂ

ಕಂದ॥ ಪರಮಾತ್ಮನೆ ನಿನ್ನೊಡನಾಂ |
ಬರಲಾರೆನು ರಜತಗಿರಿಗೆ ಮನ್ನಿಪುದೆನ್ನಂ ॥
ಇರುತಿಲ್ಲಿಯೆ ಮರಣಾಂತ್ಯದ |
ವರೆಗಂ ಸೇವಿಪೆನು ನಿನ್ನ ಚರಣವನೆಂದುಂ ॥

ಪ್ರಭು ನಿನ್ನಾಜ್ಞೆಗೆ ಪ್ರತಿಯಾಡಿದುದಕ್ಕಾಗಿ ಕ್ಷಮೆಯನ್ನು ಯಾಚಿಸುವೆನು.

ಈಶ್ವರ :—ಅದೇಕೆ. ಸುಕುಮಾರ. ದಿವ್ಯ ಸಾಯುಜ್ಯ ಪದವಿಗಿಂತಲೂ, ಪಾಪಭೂಯಿಷ್ಠವಾದ ಈ ಮರ್ತ್ಯಜೀವನದಲ್ಲೇಕೆ ಇಷ್ಟು ಅಭಿಮಾನ ಪಡುತ್ತಿರುವೆ ?

ಮಾರ :—ಸರ್ವೇಶ್ವರ. ಈ ಧಾರಭೂತವಾದ ಮಾನವ ಜೀವನದಲ್ಲೆನಗೆ ಅಭಿಮಾನವಿಲ್ಲ. ನಾನು ಕೈಲಾಸಕ್ಕೆ ಬಾರೆನೆಂದುದರ ಕಾರಣವು ಬೇರೆ ಇರುವುದು.

ಈಶ್ವರ :—ವತ್ಸ, ಅದೇನೆಂಬುದನ್ನು ಸಂಕೋಚವಿಲ್ಲದೆ ತಿಳಿಸು. ನಿನ್ನ ಅಪೇಕ್ಷೆಯು ಅಸಾಧ್ಯವಾಗಿದ್ದರೂ ಅದನ್ನು ನೆರವೇರಿಸಿ ಕೊಡುವೆನು.

ಮಾರ :—ಮಹಾಪ್ರಭು, ನನ್ನ ಅಪೇಕ್ಷೆಯು ಅತಿ ಸಾಮಾನ್ಯವಾದುದು.

ಕಂದ॥ ಕೊಡಲಾರೆನೆಂಬ ನೋಂಪಿಗೆ ।
ಎಡರಡಸಿದುದಿಲ್ಲವಿಲ್ಲಿ ನಿನ್ನಯ ದಯೆಯಿಂ ॥
ಮೃಡದೇವನೆ ಕೈಲಾಸದಿ |
ಕೊಡಬೇಕೆಂಬೊಡೆ ಮದೀಯ ವ್ರತಮದು ಕಿಡುಗುಂ

ಆದ್ದರಿಂದಲೇ ಅನುಮಾನಿಸುತ್ತಿರುವೆನಲ್ಲದೆ ಮತ್ತೇನೂ ಇಲ್ಲ.

ಈಶ್ವರ :—ಮಾರಭಕ್ತನೇ, ನಿನ್ನ ವ್ರತಾಚರಣೆಯ ರೀತಿಯು ಅಸಾಮಾನ್ಯವೂ ಲೋಕಕ್ಕೆ ಆದರ್ಶಪ್ರಾಯವೂ ಆಗಿರುವುದು. ಗಿರಿಜಾ, ಇಂತಹ ನಿಕಟ ಭಕ್ತನನ್ನು ಎಂದಾದರೂ ನೋಡಿರುವೆಯಾ ? ನಾರದ, ಈ ಅನುಪಮ ರತ್ನವನ್ನು ನನಗೆ ದೊರಕಿಸಿಕೊಟ್ಟ ನಿನ್ನನ್ನು ಎಷ್ಟೆಂದು ಅಭಿನಂದಿಸಲಿ. ವತ್ಸ, ಮಾರಭಕ್ತ, ಇಲ್ಲಿಯೇ ಬೇಕಾಗಿದ್ದಿರುವ ನವಣೆಯನ್ನು ಕೈಲಾಸದಲ್ಲೇಕೆ ಕೇಳಲಿ. ಅಲ್ಲಿಯೂ ನಿನ್ನನ್ನು ಕೇಳುವುದಿಲ್ಲ, ಈಗಲಾದರೂ ಸಮಾಧಾನವಾಯಿ

ಮಾರ :—ದೇವ, ಭಕ್ತ ಕಾಮಧೇನುವಾದ ನೀನೇ ಅನುಹಿಸಿ ಪ್ರಸನ್ನನಾಗಿರಲು ನನ್ನ ಸುಖ ಸಮಾಧಾನಗಳಿಗೆ ಕೊರತೆ. ಇದೋ ನಿನ್ನಾಜ್ಞೆಯನ್ನು ಸಿರಸಾವಹಿಸಿದೆನು.

ಪಾರ್ವತಿ :—(ಮಾರಿಯನ್ನು ಕುರಿತು) ವತ್ಸೇ, ಇನ್ನು ಹೊರಡೋಣವೇ ?

ಮಾರಿ :—ಜಗಜ್ಜನನಿ, ನನ್ನನ್ನು ಕೇಳುವುದೇನಿದೆ ? ನನಗಾದರೋ,

ಕಂದ॥ ಪತಿಯಿರಲಿದೆ ಕೈಲಾಸಂ | ಪತಿಯಿಲ್ಲದಾ ರಜತ ಭೂಧರಂ ವನವಾಸಂ | ಪತಿಯಿಂದಾ ಪೆರಳಲ್ಲಂ | ಪತಿಯೈತರೆ ಬರ್ಪೆ ಬಾರದಿರೆ ಬಾರೆನು ನಾಂ ||

ಪಾರ್ವತಿ :—ನಿನ್ನ ಪತಿಯು ನಮ್ಮೊಡನೆ ಬರಲೊಪ್ಪಿರುವನು. ನಿನ್ನ ಅಪೇಕ್ಷೆಯು ಮತ್ತೇನಾದರೂ ಇರುವುದೆ ?

ಮಾರಿ :—ತಾಯೆ, ನನ್ನ ಪತಿಯ ವ್ರತವು ಸಾಂಗವಾಗಿ ನೆರವೇರಿತು. ಆತನ ಸಕಲ ಇಷ್ಟಾರ್ಥಗಳೂ ನೆರವೇರಿರುವುವು, ನಾನು ಅಪೇಕ್ಷಿಸುವುದಿನ್ನೇನಿದೆ. ಆದರೂ ನೀನು ಅನುಗ್ರಹಿಸುವುದಾದರೆ ಇದೊಂದನ್ನು ಬೇಡುವೆನು

ಕಂದ|| ಗುಣದಿಂ ರೂಪದಿ ಸಿರಿಯಿಂ | ನಿನುಮಂ ಶಾರದೆಯ ಕಮಲ ಸಂಭವೆಯುಂ ಪೋ | ಲ್ವನುಪಮ ಪತಿವ್ರತೆಯರ್ಕಳ್ | ವನಿತಾರತ್ನಂಗಳಿದು ಬೆಳಗುಗೆ ಧರೆಯಂ ||

ಪಾರ್ವತಿ :—ತಥಾಸ್ತು, ನಾಥ, ಇನ್ನು ಹೊರಡೋಣವೇ ?

ಈಶ್ವರ :—ಆಗಲಿ, ಮಾರಭಕ್ತನೇ, ನಿನ್ನ ಅಪೇಕ್ಷೆಯು ಮತ್ತೇನಾದರೂ ಇದ್ದರೆ ಹೇಳು.

ಮಾರ :—ದೇವ, ನನ್ನ ಕಾಮಿತಗಳೆಲ್ಲವನ್ನೂ ಸಂಪೂರ್ಣಗೊಳಿಸಿಯೇ ಇರುವೆ. ನಾನಪೇಕ್ಷಿಸುವುದು ಮತ್ತೇನಿರುವುದು, ಆದರೂ ಇದೊಂದನ್ನನುಗ್ರಹಿಸು.

## ಭರತವಾಕ್ಯಂ

ಕಂದ|| ಕಾಲದಿ ಮಳೆಬೆಳೆಯಾಗಲಿ । ಶೀಲವ ಬಿಡದಿರಲಿ ಜನರು, ಗೋವಿಪ್ರರುಗಳ್ || ಬಾಳಲಿ ಸುಖದಿಂ ಮಂಗಳ । ದಾಲಯಮೆಂದೆನಿಸಿ ಮೆರೆಯಲೀ ವಸುಮತಿ ತಾಂ ||

ಈಶ್ವರ :—ತಥಾಸ್ತು. (ಎಲ್ಲರೂ ಹೋಗುವರು)

## ಮಂಗಳಂ

ಕಂದ|| ಮಂಗಳ ಮುಮೆಯರ ಸಂಗಂ |
ಮಂಗಳ ಮಾತಿವೆಗೆ ಮಂಗಳಂ ನಾರದಗಂ ||
ಅಂಗಜಹರ ಕೃಪೆಯಿಂದಂ ।
ಮಂಗಳಮೀ ಭರತಭುವಿಗೆ ಮೇಣ್ ಕೃತಿಗಂ ॥

ಸಂಪೂರ್ಣಂ.